


# ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು

ಸಿ. ಹನುಮೇಗೌಡ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಮೇ, ೧೯೭೯

ಉಪನ್ಯಾಸ ಗ್ರಂಥಮಾಲೆ
೩೦೧

# ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು

ಸಿ. ಹನುಮೇಗೌಡ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಮೇ, ೧೯೭೯

# ನನ್ನ ನುಡಿ

ಹುಬ್ಬಳ್ಳಿ ತಾಲೂಕಿನ ಕೋಳಿವಾಡ ಗ್ರಾಮದಲ್ಲಿ ದಿನಾಂಕ ೧೨-೧೧-೭೭ ರಂದು ಜರುಗಿದ ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಶಿಬಿರದಲ್ಲಿ "ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು" ಎಂಬ ವಿಷಯವಾಗಿ ಭಾಷಣವನ್ನಿತ್ತೆ. ಅದರ ಬರಹರೂಪವೇ ಈ ಪುಸ್ತಿಕೆ.

ಧಾರವಾಡ ಜಿಲ್ಲಾ ಶಿಕ್ಷಣಾಧಿಕಾರಿಯಾಗಿ ಮಾಡಿದ ನನ್ನ ಸೇವೆಯು ಶಿಕ್ಷಣ ಕ್ಷೇತ್ರದಲ್ಲಿ ನನಗೆ ಅಪಾರ ಅನುಭವವನ್ನು ತಂದುಕೊಟ್ಟಿದೆ. ಆ ಅನುಭವದ ಕೆಲ ಅಂಶಗಳನ್ನಿಲ್ಲಿ ವಿವರಿಸಲು ಯತ್ನಿಸಿರುವೆ. ಇದರಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳೆಲ್ಲವೂ ನನ್ನ ವೈಯಕ್ತಿಕ ಅನುಭವಕ್ಕೆ ಸಂಬಂಧಪಟ್ಟವುಗಳಾಗಿವೆ. ಧಾರವಾಡ ಜಿಲ್ಲೆಯ ಪ್ರಾಥಮಿಕ ಶಿಕ್ಷಣದಲ್ಲಿ ಕಂಡುಬಂದ ಈ ಸಮಸ್ಯೆಗಳು ಹೆಚ್ಚುಕಡಿಮೆ ಸಮಗ್ರ ಕರ್ನಾಟಕಕ್ಕೂ, ಅಖಿಲಭಾರತಕ್ಕೂ ಅನ್ವಯವಾಗುತ್ತವೆಯೆಂದು ಹೇಳಬಹುದು. ಶಿಕ್ಷಣ ಸಮಸ್ಯೆಗಳಿಗೆ ಸರಕಾರ ಹಾಗು ಸಾರ್ವಜನಿಕರಿಂದ ಸಕಾಲದಲ್ಲಿ ಪರಿಹಾರ ದೊರಕಿದರೆ ರಾಷ್ಟ್ರವು ತೀವ್ರಗತಿಯಲ್ಲಿ ಅಭಿವೃದ್ಧಿ ಹೊಂದುವದರಲ್ಲಿ ಸಂದೇಹವಿಲ್ಲ. ರಾಷ್ಟ್ರದ ತಾಯಿಬೇರಿನಂತಿರುವ ಪ್ರಾಥಮಿಕ ಶಿಕ್ಷಣದ ಸರ್ವತೋಮುಖ ಅಭಿವೃದ್ಧಿಯಲ್ಲಿ ಪ್ರಾಜ್ಞರು ಗಮನ

ವೀಯಬೇಕೆಂಬಾಶೆಯಿಂದ ರಚಿತವಾದ ಈ ಪುಸ್ತಿಕೆಯನ್ನು ಎಲ್ಲರೂ ಓದಿ ಪ್ರಯೋಜನ ಪಡೆಯುವರೆಂದು ನಂಬಿರುವೆ.

ಪುಸ್ತಿಕೆಯು ಹಸ್ತಪ್ರತಿಯಲ್ಲಿದ್ದಾಗ ನನ್ನ ಸ್ನೇಹಿತರೂ ಕರ್ನಾಟಕ ವಿಶ್ವವಿದ್ಯಾಲಯದ ಉಪಗ್ರಂಥಪಾಲರೂ ಆದ ಡಾ. ಎಸ್. ಆರ್. ಗುಂಜಾಳರು ಅದನ್ನು ಆಮೂಲಾಗ್ರ ಓದಿ ಉಪ ಯುಕ್ತ ಸೂಚನೆಗಳನ್ನು ನೀಡಿದ್ದಾರೆ. ಅದಕ್ಕಾಗಿ ಅವರಿಗೆ ಅತ್ಯಂತ ಋಣಿಯಾಗಿರುವೆ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನ ವಿಭಾಗದ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿಯವರು ಶಿಬಿರ ದಲ್ಲಿ ಭಾಷಣ ಮಾಡಲು ಅನುವು ಮಾಡಿಕೊಟ್ಟರಲ್ಲದೆ, ಅದರ ಸಾರಸಂಗ್ರಹವನ್ನು ಈ ಪುಸ್ತಿಕೆಯ ರೂಪದಲ್ಲಿ ಪ್ರಕಟಿಸಿರುವುದ ಕ್ಕಾಗಿ ಅವರಿಗೂ ಕರ್ನಾಟಕ ವಿಶ್ವವಿದ್ಯಾಲಯಕ್ಕೂ ಕೃತಜ್ಞನಾಗಿ ರುವೆ.

ಧಾರವಾಡ<br>
೧೮–೫–೭೯

ಸಿ. ಹನುಮೇಗೌಡ<br>
ಜಿಲ್ಲಾ ಶಿಕ್ಷಣಾಧಿಕಾರಿಗಳು

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ, ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ, ವಿಶ್ವವಿದ್ಯಾಲಯ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೦೦ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆ ಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತ ಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ

**ಎಸ್. ಎಸ್. ಒಡೆಯರ**<br>ಕುಲಪತಿಗಳು

# ವಿಷಯ ಸೂಚಿ

# ೧. ಶಿಕ್ಷಣ

ಮಕ್ಕಳು ನಮ್ಮ ರಾಷ್ಟ್ರದ ಸ್ವತ್ತು. ದಿಗಂತದವರೆಗೂ ಹಬ್ಬಿರುವ ಪರ್ವತಗಳು, ನಿರಂತರವಾಗಿ ಹರಿಯುವ ನದಿಗಳು, ನಿಬಿಡವಾಗಿ ಬೆಳೆದಿರುವ ಕಾನನಗಳು. ಹೇರಳವಾಗಿ ಸಿಕ್ಕುವ ಖನಿಜಗಳು; ವೈಭವಯುತವಾಗಿರುವ ಕಟ್ಟಡಗಳು, ಕಾರ್ಖಾನೆಗಳು. ದೇಶದ ನಿರ್ಜೀವ ಸಂಪತ್ತಾದರೆ; ವೈಜ್ಞಾನಿಕ ಮನಃಶಕ್ತಿ, ಹೃದಯದ ಭಾವನಾ ಶಕ್ತಿಗಳಿಂದ ಕೂಡಿರುವ ಮಕ್ಕಳು ರಾಷ್ಟ್ರದ ಸಜೀವ ಸಂಪತ್ತು. ಬಾಲ್ಯದಲ್ಲಿ ಇವರು ತಮ್ಮ ತಂದೆ ತಾಯಿಗಳ ಮಕ್ಕಳಾದರೂ ತದನಂತರ ಅವರು ದೇಶದ ಮಕ್ಕಳು. ಇಂದಿನ ವಿದ್ಯಾವಂತ ಮಕ್ಕಳೇ. ಮುಂದಿನ ಪ್ರತಿಭಾನ್ವಿತ ಜನತೆ. ಆದ್ದರಿಂದ ಇಂದಿನ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕು.

ಆದರೆ ತಂದೆ ತಾಯಿಗಳು ಅನಕ್ಷರಸ್ಥರು. ಆದರೂ ಅವರು ತಮ್ಮ ಪ್ರೀತಿಯ ಮಕ್ಕಳ ಅಭ್ಯುದಯವನ್ನು ಸದಾಕಾಲವೂ ನಿರೀಕ್ಷಿಸುತ್ತಾರೆ. ಮಕ್ಕಳು ಶಾಲೆಗೆ ಬರುವದಿಲ್ಲ. ಕೆಲವು ತಂದೆ ತಾಯಿಗಳು ಮಕ್ಕಳನ್ನು ಮನೆಯಲ್ಲಿಯೇ ಇಟ್ಟುಕೊಳ್ಳುತ್ತಾರೆ. 'ವಿದ್ಯೆ ಕಲಿತರೆ ಮಕ್ಕಳು ಕೆಡುತ್ತಾರೆ. ತಮ್ಮ ತಂದೆ ತಾಯಿಗಳನ್ನು ರಕ್ಷಿಸುವದಿಲ್ಲ' ಎನ್ನುವ ನಂಬಿಕೆ ಇದಕ್ಕೆ ಕಾರಣ. ಈ ನಂಬಿಕೆ ಸಂಪೂರ್ಣ ಸುಳ್ಳಲ್ಲವೆಂದು ಕೆಲವು ಶಿಕ್ಷಣ ತಜ್ಞರ ಅಭಿಪ್ರಾಯ. ಕೆಲವರು ವಿದ್ಯಾವಂತರಾದ ಮೇಲೆ ತಂದೆ ತಾಯಿಗಳನ್ನು ಅನಾದರ ಮಾಡಿರುವುದು ಉಂಟು. ಹಳ್ಳಿಯ ಜನರು ಧರಿಸಲು ಬಟ್ಟೆಯಿಲ್ಲದೇ ತಿನ್ನಲು

ಅನ್ನವಿಲ್ಲದೇ ಕೊರಗುತ್ತಿರುವ ದಾರುಣ ಪರಿಸ್ಥಿತಿಯನ್ನು ಎಷ್ಟಿರೂ
ನೋಡಿದ್ದಾರೆ. ಅವರಿಗೆ ಸಾಲಗಳ ಕಾಟ, ಮದುವೆ–ಮುಂಜಿವೆ
ಗಳ ಖರ್ಚು ಇದೆ. ಇಂಥ ಸ್ಥಿತಿಯಲ್ಲಿ ಹೊಲ–ಮನೆ–ಮಠ
ಗಳನ್ನು ಪರರಿಗೆ ಮಾರಿ, ಮಕ್ಕಳನ್ನು ವಿದ್ಯಾವಂತರ
ನ್ನಾಗಿ ಮಾಡುತ್ತಾರೆ. ಬಡತನದ ಕಾರ್ಪಣ್ಯ ಪರಿಸ್ಥಿತಿ ಎಷ್ಟೇ
ಇದ್ದಾಗ್ಯೂ, ಈ ವೇದನೆಯನ್ನು ಸಹಿಸಿಕೊಂಡು ತಮ್ಮ ವಂಶದ
ಕುಡಿಗಳಾದ, ತಮ್ಮ ಕರುಳು, ರಕ್ತಮಾಂಸಗಳಿಂದ ಬೆಳೆದ ಕಂದಮ್ಮ
ಗಳಾದ, ತಮ್ಮ ಮನೆಯ ಮುದ್ದು ಮಣಿಗಳಾದ ಮಕ್ಕಳು
ವಿದ್ಯಾವಂತರಾಗಿ ನಾಳೆಯ ನಾಡಿನ ವಿದ್ವನ್ಮಣಿಗಳಾಗಲೆಂದು ಅವಿ
ವಿದ್ಯಾವಂತರನ್ನಾಗಿ ಮಾಡಿ ನಿರ್ಗತಿಕರಾಗಿದ್ದಾರೆ. ಕೂಡಲು ಸ್ಥಳ
ವಿಲ್ಲದೆ, ವಾಸಿಸಲು ಮನೆಯಿಲ್ಲದೆ. ಜೀವನದ ಊರುಗೋಲಿ
ನಂತಿದ್ದ ಆಸ್ತಿಯನ್ನು ಮಾರಿ ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ
ಮಾಡುವರು. ಆ ವಿದ್ಯಾವಂತ ಮಕ್ಕಳು ತಮ್ಮ ತಂದೆ–ತಾಯಿ
ಗಳ ಹೊಣೆಯನ್ನು ಹೊತ್ತುಕೊಳ್ಳದೇ ತಾವು ಸುಖವಾಗಿರಲು
ಬಯಸುತ್ತಾರೆ. ಇಂತಹ ಕೆಲವು ವಿದ್ಯಾವಂತರ ತಂದೆತಾಯಿಗಳು
ಪಡುವ ಕಷ್ಟ ಇತರ ಹಳ್ಳಿಯ ತಂದೆ–ತಾಯಿಗಳ ಮನಸ್ಸಿನ
ಮೇಲೆ ಭೀಕರ ಪರಿಣಾಮವನ್ನು ಉಂಟುಮಾಡುತ್ತವೆ.

ವಿದ್ಯಾವಂತರು ತಮ್ಮ ತಂದೆ ತಾಯಿಗಳನ್ನು ಸಂಪೂರ್ಣ
ವಾಗಿ ಮರೆಯುತ್ತಾರೆ. ಎಂಬ ಭಾವನೆ ಮೂಡುತ್ತದೆ. ಕೇವಲ
ಕೆಲವು ಜನರು ಮಾತ್ರ, ಹೀಗೆ ಮಾಡಬಹುದು. ಎಲ್ಲಾ ವಿದ್ಯಾ
ವಂತ ಜನರು ಹಾಗೆ ಮಾಡುವದಿಲ್ಲವೆಂಬುದು ನಿರಕ್ಷರ ಕುಕ್ಷಿಗಳಾ
ರುವ ಆ ಹಳ್ಳಿಯ ಬಂಧು–ಭಗಿನಿಯರಿಗೆ ಹೇಗೆ ಅರ್ಥವಾಗ

..ಬೇಕು? ಆದ್ದರಿಂದಲೇ 'ಮಕ್ಕಳನ್ನು ಶಾಲೆಗೆ ಕಳುಹಿಸುವದೇ ಬೇಡ' ಅನ್ನುತ್ತಾರೆ. ಮನೆಯ ವಾತಾವರಣ ಕೆಲವು ವಿದ್ಯಾವಂತರನ್ನು ಬಲಾತ್ಕರಿಸಿ ತಮ್ಮ ತಂದೆ ತಾಯಿಗಳ ಅನಾದರಣೆಗೆ ಕಾರಣವಾಗಿರಬೇಕು. ಅಥವಾ ತಮ್ಮ ಜೀವನದ ಮಟ್ಟಕ್ಕೆ ತಮ್ಮ ಅನಾಗರಿಕ ಪ್ರಾಚೀನ ಸಂಪ್ರದಾಯದ ತಂದೆ ತಾಯಿಗಳು ಹೊಂದಿಕೊಳ್ಳದ್ದೂ ಇರಬಹುದು. ಕಾರಣಗಳು ಏನೇ ಇರಲಿ, ಮಕ್ಕಳ ಅಭಿವೃದ್ಧಿಗಾಗಿ ಅವರನ್ನು ವಿದ್ಯಾವಂತರನ್ನಾಗಿ ಮಾಡುವದು ತಂದೆ ತಾಯಿಗಳ ಹೊಣೆ ಎಷ್ಟರಮಟ್ಟಿಗೆ ಇರುತ್ತದೆಯೋ ಅಷ್ಟೇ ಆ ವೃದ್ಧ ತಂದೆತಾಯಿಗಳ ರಕ್ಷಣೆ ಮಾಡುವದು ವಿದ್ಯಾವಂತ ಮಕ್ಕಳ ಹೊಣೆಯಾಗಿರುತ್ತದೆ. ಈ ಹೊಣೆಯನ್ನು ವಿದ್ಯಾವಂತ ಜನತೆ ಯಶಸ್ವಿಯಾಗಿ ಹೊತ್ತಾಗ ತಂದೆ ತಾಯಿಗಳು ಮಕ್ಕಳನ್ನು ಶಾಲೆಗೆ ಕಳುಹಿಸಿ. ವಿದ್ಯಾವಂತರನ್ನಾಗಿ ಮಾಡುವದರಲ್ಲಿ ಸಂಶಯವಿಲ್ಲ.

ಮಕ್ಕಳಿಗೆ ತಂದೆ ಬಾಲ್ಯದೊ  
ಳಕ್ಕರ ವಿದ್ಯೆಯ ಕಲಿಸದಿರ್ದೊಡೆ ಕೊಂದು ।  
ಲಕ್ಕ ಧನವಿರಲು ಕೆಡುಗುಂ  
ಚಿಕ್ಕಂದಿನ ವಿದ್ಯೆ ಪೊರೆಗು ಚೂಡಾರತ್ನಾ ॥

ಎಂಬ ಸುಭಾಷಿತಕಾರನ ಅನುಭವದ ಈ ವಾಣಿಯು ತಂದೆ ತಾಯಿಗಳೆಲ್ಲ ಸದಾ ಸ್ಮರಣೆಯಲ್ಲಿಟ್ಟುಕೊಳ್ಳುವಂತಹದಾಗಿದೆ.

ಅನಕ್ಷರಸ್ಥ ತಂದೆತಾಯಿಗಳ ಮನವೊಲಿಸಿ ಅವರ ಮಕ್ಕಳನ್ನು ಶಾಲೆಗೆ ತರುವದು, ಬಹು ಕಷ್ಟವಾದ ವಿಷಯವೇ ಸರಿ. ಅದರರ್ಥ ತಂದೆತಾಯಿಗಳಿಗೆ ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಇಷ್ಟವಿಲ್ಲವೆಂದಲ್ಲ. ತಾವು ಸಂಪಾದಿಸಿರುವ ಆಸ್ತಿಯು

ಮಗನಿಗಾಗಿಯೇ ಎಂಬ ಅರಿವನ್ನು ಅವರಲ್ಲಿ ಮೂಡಿಸಬೇಕು. ಒಂದು ವೇಳೆ ಅವರ ಸಂತಾನದ ಕುಡಿಯಾದ ಮಗ ದಡ್ಡನಾದರೆ ಅವರು ಸಂಪಾದಿಸಿದ ಆಸ್ತಿಯೆಲ್ಲಾ ಪರರ ಪಾಲಾಗುತ್ತದೆ. ಯಾರಿಗಾಗಿ ಆಸ್ತಿ ಸಂಪಾದಿಸಿದೆಯೋ ಅವರಿಗಾಗಿಯೇ ಶಾಲೆಗಳು ಇರುವದು. ತಂದೆ ತಾಯಿಗಳ ಆಸ್ತಿಯನ್ನು ಶಾಶ್ವತವಾಗಿ ಮಕ್ಕಳು ಅನುಭವಿಸಿಕೊಂಡು ಹೋಗಬೇಕಾದರೆ ಅವರು ವಿದ್ಯಾವಂತರಾಗಬೇಕು. ವಿದ್ಯಾವಂತರಾಗುವದರಿಂದ ಬುದ್ಧಿ ಹೆಚ್ಚುತ್ತದೆ. ತಿಳಿವು ಉಂಟಾಗುತ್ತವೆ. ಬುದ್ಧಿವಂತನಾದ ಮಗ ತಂದೆ ತಾಯಿಗಳ ಆಸ್ತಿಯನ್ನು ಉಳಿಸಿಕೊಳ್ಳುವದು ಮಾತ್ರವೇ ಅಲ್ಲ, ಇನ್ನೂ ಹೆಚ್ಚು ಆಸ್ತಿ ಸಂಪಾದಿಸಬಲ್ಲ. ಅವನು ಕೇವಲ ಮುದ್ದು ಮಗು ಮಾತ್ರವಲ್ಲ. ನಾಡಿನ ಮುದ್ದು ಮಣಿ. ಅಂತಹ ಮಕ್ಕಳು ಕೇವಲ ಮನೆಗೆ ಮಾತ್ರವೇ ಅಲ್ಲದೆ ಇಡೀ ದೇಶದ ಸ್ವತ್ತಾಗಿ ಉಳಿಯುತ್ತಾರೆ. ರಾಷ್ಟ್ರ ಹಾಗೂ ಸಮಾಜ ಶ್ರೀಮಂತವಾಗುತ್ತದೆ. ಆದ್ದರಿಂದ ಬರೀ ಆಸ್ತಿಯನ್ನು ಸಂಪಾದನೆ ಮಾಡುವದಕ್ಕಿಂತ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿದರೆ ಅವರೇ ದೊಡ್ಡ ಆಸ್ತಿ ಎಂಬ ವಿಷಯವನ್ನು ತಂದೆ ತಾಯಿಗಳಿಗೆ ಪರಿಣಾಮಕಾರಿಯಾಗುವಂತೆ ಹೇಳಬೇಕು. ಆಗ ಅವರು ವಿದ್ಯೆಯ ಮಹತ್ವವನ್ನರಿತು ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ. ಕ್ರೂರ ಮೃಗಗಳಾದ ಹುಲಿ ಸಿಂಹಗಳು ತಾವು ತಮ್ಮ ಮರಿಗಳನ್ನು ಹಡೆದಾಗ ಯಾರಾದರೂ ಅವುಗಳನ್ನು ಹಿಡಿಯಲು ಹೋದರೆ, ತಮ್ಮ ಪ್ರಾಣವನ್ನು ಲೆಕ್ಕಿಸದೆಯೇ ಹಿಡಿಯಲು ಬಂದವರ ಮೇಲೆ ಬಿದ್ದು ತಮ್ಮ ಮರಿಗಳನ್ನು ರಕ್ಷಿಸುತ್ತವೆ. ಹೀಗಿರುವಾಗ ನಾಗರಿಕತೆಯು

ಪರಮಾವಧಿಯನ್ನು ಮುಟ್ಟಿರುವ ಮಾನವ, ತನ್ನ ಮಕ್ಕಳ ವಿಷಯದಲ್ಲಿ ಅನಾದರ ತೋರಿಸಲಾರ. ತನ್ನ ಕರುಳ ರಕ್ತಮಾಂಸಗಳಿಂದ ಬಂದಿರುವ ಮಕ್ಕಳ ಅಭಿವೃದ್ಧಿಗಾಗಿ ಅಹೋ ರಾತ್ರಿ ಕನವರಿಸುತ್ತಾನೆ. ವಿದ್ಯೆಯ ಮಹತ್ವವನ್ನು ಹೇಳಿ ಅವನನ್ನು ಒಲಿಸುವದು ಒಂದು ಕಲೆ. ಈ ಕಲೆ ಸರ್ವರಲ್ಲಿ ಇರುವದಿಲ್ಲ. ಆದ್ದರಿಂದ ಶಾಲೆಗೆ ಮಕ್ಕಳು ಬಾರದೇ ಶಿಕ್ಷಣ ಕ್ಷೇತ್ರದಲ್ಲಿ ಕೊಳೆ ಮತ್ತು ಅಪವ್ಯಯ ಹೆಚ್ಚಾಗುತ್ತದೆ. ಧಾರವಾಡ ಜಿಲ್ಲೆಯ ಕೊಳೆ ಮತ್ತು ಅಪವ್ಯಯ ಹಾಗೂ ನಪಾಸು (ಡ್ರಾಪ್ ಔಟ)ಗಳ ದುಷ್ಪರಿಣಾಮ ಹೀಗಿದೆ:

ಪ್ರಾಥಮಿಕ ೧ನೇ ಇಯತ್ತೆಗೆ ೯೮೩೮೪ ವಿದ್ಯಾರ್ಥಿ ಇದ್ದರೆ ೭ನೆ ಇಯತ್ತೆಗೆ ೭೨೭೪೦ ವಿದ್ಯಾರ್ಥಿಗಳು ಉಳಿಯುತ್ತಾರೆ. ಹೀಗೆ ಮೇಲಿನ ತರಗತಿಗಳಿಗೆ ಹೋದಂತೆ ಈ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತ ಹೋಗುತ್ತದೆ. ವಿದ್ಯಾರ್ಥಿಗಳ ಸಂಖ್ಯೆ ತರಗತಿಯಿಂದ ತರಗತಿಗೆ ಕಡಿಮೆಯಾಗಲು ಕಾರಣವೇನು ? ತಂದೆ ತಾಯಿಗಳ ಅನಾದರಣೆ ಮತ್ತು ಅನಾಸಕ್ತಿ ಇದಕ್ಕೆ ಕಾರಣ. ಒಂದಲ್ಲ ಒಂದು ನೆವದಿಂದ ಮಕ್ಕಳನ್ನು ಮನೆಯಲ್ಲಿ ಇಟ್ಟುಕೊಳ್ಳುವುದು. ಇಷ್ಟು ಮಾತ್ರವೇ ಅಲ್ಲ. ತಂದೆ ತಾಯಿಗಳ ಹಾಗೂ ಪೋಷಕ ವರ್ಗದ ಆರ್ಥಿಕ ಪರಿಸ್ಥಿತಿಯೂ ಮತ್ತೊಂದು ಕಾರಣ. ಬಹುತೇಕ ತಂದೆ ತಾಯಿಗಳು ಹಳ್ಳಿಯಲ್ಲಿ ಒಕ್ಕಲುತನ ಮಾಡುತ್ತಿದ್ದಾರೆ. ಕೆಲವರಿಗೆ ಹೊಲ ಗದ್ದೆಗಳು ಇವೆ. ಮತ್ತೆ ಕೆಲವರಿಗೆ ಇಲ್ಲ. ಇರುವವರೂ ಸಹ ಸಾಕಷ್ಟು ದವಸ ಧಾನ್ಯ ಬೆಳೆಯಲು ಸಾಧ್ಯವಾಗಿಲ್ಲ. ಕಾರಣ ಸಕಾ

ಲಕ್ಷ್ಯ ಮಳೆಯಿಲ್ಲ; ಮಳೆ ಬಿದ್ದರೂ ವ್ಯವಸಾಯ ಮಾಡಲು ಸಾಕಷ್ಟು ಸಲಕರಣೆಗಳಿಲ್ಲ. ಹೊಲಗದ್ದೆ ಇಲ್ಲದ ರೈತರು ಬೇರೆ ಯವರ ಹೊಲ–ಗದ್ದೆಗಳಲ್ಲಿ ಹೋಗಿ ಕೆಲಸ ಮಾಡುವರು. ಇಲ್ಲವೇ ಇತರೇ ಕೂಲಿ ಕೆಲಸ ಮಾಡುವರು. ಈ ಕಾರಣಗಳಿಂದಾಗಿ ದುಡಿ ಯಲು ಹೊರಗೆ ಹೋದಾಗ ಮನೆಯಲ್ಲಿ ಮಕ್ಕಳನ್ನು ಆಡಿಸಲು ಮೊದಲ ಮಗು ಬೆಳೆದ ತಕ್ಷಣವೇ ಶಾಲೆಯನ್ನು ಬಿಡಿಸಿ ಅವನ್ನು ಮನೆ ಕೆಲಸಕ್ಕೆ ಹಚ್ಚುವರು. ತಪ್ಪಿದರೆ ದನ–ಕರುಗಳನ್ನು ಮೇಯಿ ಸಲು ಹೊಲಕ್ಕೆ ಕಳುಹಿಸುವರು. ಪಾಪ, ಆ ಹಾಲು ಕಂದಮ್ಮ ಗಳು ಮನೆಗೆಲಸ, ಹೊಲಗೆಲಸಗಳನ್ನು ಎಷ್ಟರ ಮಟ್ಟಿಗೆ ಮಾಡಿ ಬಡತನವನ್ನು ನೀಗಿಸಬಹುದು. ಈ ಮಕ್ಕಳೇ ಮುಂದಿನ ಭಾರತದ ಭವ್ಯ ಜನಾಂಗ; ಪ್ರಜಾಪ್ರಭುತ್ವದ ಅಡಿಗಲ್ಲು.

ನಾಡಿನ ಮಕ್ಕಳು ರಾಷ್ಟ್ರದ ಸ್ವತ್ತು. ಈ ಸ್ವತ್ತಿನ ರಕ್ಷಣೆಯ ಎಚ್ಚರಿಕೆ ಬಾಲ್ಯದಿಂದಲೂ ಅರವಿತವಾಗಿ ನಡೆಯಬೇಕು. ಕೇವಲ ಸರಕಾರದ ವಿದ್ಯಾಭ್ಯಾಸದ ಇಲಾಖೆ ಒಂದೆ ಅಲ್ಲ. ಇತರ ಇಲಾಖೆ ಗಳೂ ಇದರ ಕಡೆಗೆ ಗಮನ ಹರಿಸಿ, ತಂದೆತಾಯಿಗಳು ಕಡ್ಡಾಯ ವಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುವ ವ್ಯವಸ್ಥೆ ಮಾಡಬೇಕು. ಮಿತಸಂತಾನ ಯೋಚನೆಗೆ ಎಲ್ಲರೂ ಹೇಗೆ ಸಹಕರಿಸಬೇಕೋ ಹಾಗೆ ಬದುಕಿರುವ ಮಕ್ಕಳ ವಿದ್ಯಾ ವ್ಯವಸ್ಥೆಗೆ ಎಲ್ಲರೂ ಸಹಕರಿಸ ಬೇಕು. 'ವಿದ್ಯಾವಂತರಾಗದೇ ದಾರಿದ್ರ್ಯ ಪರಿಹಾರವಾಗದು; ದಾರಿದ್ರ್ಯ ಪರಿಹಾರವಾಗದೇ ವಿದ್ಯಾವಂತರಾಗಲು ಸಾಧ್ಯವಿಲ್ಲ' ಎಂಬ ಬೀಜವೃಕ್ಷ ನ್ಯಾಯದ ಸುಳಿವಿನಲ್ಲಿ ಈ ಸಮಸ್ಯೆ ಇಂದು ಸಿಕ್ಕಿಬಿದ್ದಿದೆ.

## ೨. ಕಡ್ಡಾಯ ಶಿಕ್ಷಣ

ಶಿಕ್ಷಣವನ್ನು ಹಗಲು ವೇಳೆಯಲ್ಲಿ ನಿಯಮಿತ ಕಾಲದಲ್ಲಿ ಕಲಿಯಲು ಅವಕಾಶವಿಲ್ಲದ ಮಕ್ಕಳಿಗೆ ಸರಕಾರ ಒಂದು ಯೋಜನೆಯನ್ನು ಮಾಡಿದೆ. ಅದು ಕೆಲವು ಜಿಲ್ಲೆಗಳಲ್ಲಿ ಜಾರಿಯಲ್ಲಿದೆ. ಹಗಲು ಕೆಲಸ ಮಾಡಿ ಮನೆಗೆ ಬಂದ ಮಕ್ಕಳು ರಾತ್ರಿಯ ವೇಳೆಯಲ್ಲಿ ನಿರಾತಂಕವಾಗಿ ರಾತ್ರಿ ಶಾಲೆಯಲ್ಲಿ ಅಧ್ಯಯನವನ್ನು ಮುಂದುವರಿಸಬಹುದು. ಆದರಿಂದ ಕಡ್ಡಾಯ ಶಿಕ್ಷಣಕ್ಕೆ ಒಳಪಡದೆ ಇರುವ ಮಕ್ಕಳು, ಶಾಲೆಯನ್ನು ಪ್ರಾರಂಭದಲ್ಲಿಯೇ ಬಿಟ್ಟು ಹೋದ ಮಕ್ಕಳು, ೧೫ ವರ್ಷದಿಂದ ೩೫ ವರ್ಷದ ಒಳಗೆ ಇರುವ ತರುಣ ಜನಾಂಗ ಈ ಯೋಜನೆಗೆ ಒಳಪಡಬೇಕಾಗುತ್ತದೆ. ಮೇಲ್ಕಂಡ ವಯಸ್ಸಿನ ಅಂತರದಲ್ಲಿರುವ ಯುವಜನಾಂಗದವರು ಸ್ಫೂರ್ತಿದಾಯಕರಾಗಿ, ಆಶಾದಾಯಕರಾಗಿ, ನೆಮ್ಮದಿ ಸುಖ ಶಾಂತಿ ಹಾಗು ಪ್ರಗತಿದಾಯಕ ಜೀವನವನ್ನು ನಡೆಸುವ ಹೊಂಗನಸನ್ನು ಕಾಣುವುದರಿಂದ ಅವರನ್ನು ವಿದ್ಯಾವಂತರನ್ನಾಗಿ ಮಾಡಿದರೆ ದೇಶದ ದುಡಿಮೆ, ದೇಶದ ಸಂಪತ್ತು ಹೆಚ್ಚುವದರಲ್ಲಿ ಸಂಶಯವಿಲ್ಲ. ಸ್ವಾರ್ಥತೆಯನ್ನು ಮರೆತು ಕೀರ್ತಿಯ ಶಿಖರವನ್ನು ಮುಟ್ಟಿ ರಾಷ್ಟ್ರಕ್ಕಾಗಿ ತ್ಯಾಗ ಮಾಡಬೇಕೆನ್ನುವ ಜನಾಂಗವನ್ನು ನಾವು ಇಲ್ಲಿ ಕಾಣಬಹುದು. ಈ ಜನಕೋಟಿ ವಿದ್ಯಾವಂತರಾದಾಗ ದೇಶದ ಅರ್ಥ ಸಮಸ್ಯೆ ಪರಿಹಾರವಾಗುತ್ತದೆ. ದೇಶದ ದಾರಿದ್ರ್ಯ ಪರಿಹಾರ ಆಗುತ್ತದೆ. ರಾಷ್ಟ್ರದ ಅರ್ಥಶಕ್ತಿ ಅಧಿಕಗೊಳ್ಳುತ್ತದೆ. ಈ

ನವಯುವಜನಾಂಗದ ಉತ್ಸಾಹ ಮಹಾಪೂರ ಹೊಳೆ ರೂಪದಲ್ಲಿ ಹರಿಯಲು ಅವಕಾಶ ಕೊಟ್ಟಲ್ಲಿ, ಆ ಹುಚ್ಚು ಪ್ರವಾಹಕ್ಕೆ ಸಿಕ್ಕಿದ ಹಳ್ಳಿಗಳೂ, ನಗರಗಳೂ ಕಟ್ಟಿರುವ ಕಟ್ಟಡಗಳೆಲ್ಲವೂ ಕೊಚ್ಚಿ ಹೋಗುತ್ತವೆ. ಆ ಜನಾಂಗದ ಉತ್ಸಾಹಕ್ಕೆ ವಿದ್ಯೆಯನ್ನು ಕೊಟ್ಟು ಶಾಂತಿ ಶಿಸ್ತು ಎಂಬ ಆಣೆಕಟ್ಟನ್ನು ಕಟ್ಟಿ ವಿದ್ಯಾಪ್ರಜ್ಞೆ, ಉತ್ಸಾಹ ಸಂಯಮಗಳ ಜಲಾಶಯವನ್ನು ನಿರ್ಮಿಸಿದಲ್ಲಿ, ಅದನ್ನು ರಾಷ್ಟ್ರದ ಕಲ್ಯಾಣಕರ ಕಾರ್ಯಗಳಿಗೆ ತೂಬುಗಳ ಮೂಲಕ ಹರಿಸಿಕೊಂಡಲ್ಲಿ ಲೋಕಕಲ್ಯಾಣ ಹಾಗೂ ರಾಷ್ಟ್ರದ ಕಲ್ಯಾಣವಾಗುವದರಲ್ಲಿ ಸಂಶಯವಿಲ್ಲ. ಅಗೋಚರವಾಗಿರುವ ಈ ಶಕ್ತಿಚೈತನ್ಯಗಳ ಬೀಜಗಳಿಗೆ 'ವಿದ್ಯೆ' ಎಂಬ ನೀರು ಗೊಬ್ಬರವನ್ನು ಕೊಟ್ಟಾಗ ಅವು ಮೊಳಕೆಯೊಡೆದು ಮರವಾಗಿ ಬೆಳೆಯುತ್ತವೆ.

ಆಲದ ಮರದ ಬೀಜ ಸಾಸಿವೆಕಾಳಿನ ಗಾತ್ರದಲ್ಲಿದೆ. ಅದಕ್ಕೆ ಮಣ್ಣು ಹಾಕಿ ನೀರನ್ನು ಒದಗಿಸಿದರೆ ಅದು ಗಿಡವಾಗಿ ಬೆಳೆದು ಹೆಮ್ಮರವಾಗಿ ಹಬ್ಬಿ ತನ್ನ ಶಾಖೋಪಶಾಖೆಗಳನ್ನು ಚಾಚಿ ಬಳಲಿರುವ ಯಾತ್ರಿಕರಿಗೆ ಆಶ್ರಯಕೊಡುವ ವಟವೃಕ್ಷವಾಗುತ್ತದೆ. ಹಾಗೆಯೇ ಮಕ್ಕಳಲ್ಲಿರುವ ಶಕ್ತಿ ಚೈತನ್ಯಗಳೆಂಬ ಬೀಜಕ್ಕೆ ವಿದ್ಯೆ ಎಂಬ ನೀರು ಗೊಬ್ಬರ ಹಾಕಿದಾಗ ದೊಡ್ಡ ದೊಡ್ಡ ಧೀಮಂತ ವ್ಯಕ್ತಿಗಳಾಗುತ್ತಾರೆ, ಮತಪ್ರವರ್ತಕರಾಗುತ್ತಾರೆ, ತತ್ವಜ್ಞಾನಿಗಳಾಗುತ್ತಾರೆ, ತಪೋನಿಷ್ಠರಾಗುತ್ತಾರೆ, ಕವಿಪುಂಗವರಾಗುತ್ತಾರೆ. ಆದ್ದರಿಂದ ವ್ಯಕ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ವಿದ್ಯೆ ಅನಿವಾರ್ಯ. ವಿದ್ಯೆಯ ಪ್ರತಿಫಲ ತಾತ್ಕಾಲಿಕವಾದುದಲ್ಲ. ಅದು ಶಾಶ್ವತವಾ

ದದ್ದು. ಹಾಗೆ ಅತಿ ಅವಸರದಲ್ಲಿ ಅಥವಾ ಅತಿ ಜಾಗ್ರತೆ ಅದರ ಪ್ರತಿಫಲವನ್ನು ನಾವು ನಿರೀಕ್ಷಿಸುವುದಿಲ್ಲ. ಕಾರಣ ವಿದ್ಯೆಯನ್ನು ಪಡೆಯುತ್ತಿರುವ ಮಕ್ಕಳು ಇನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಅದರ ಪ್ರತಿಫಲದ ನಿರೀಕ್ಷೆ ಅನಿರೀಕ್ಷಿತವಾದದ್ದು. ಆ ಮಕ್ಕಳು ದೊಡ್ಡವರಾದ ಮೇಲೆ ಅವರ ಮೇಲಾದ ವಿದ್ಯೆಯ ಪರಿಣಾಮ ವೇದ್ಯವಾಗುತ್ತದೆ.

'ಶಿಶುವು ಪಿತನ ಜನಕ.' ಇಂದು ಮಕ್ಕಳಿಗೆ ಎಂತಹ ವಿದ್ಯಾ-ಭ್ಯಾಸ ದೊರೆತಿದೆಯೋ ಅಂತಹ ಪರಿಣಾಮಕಾರಿಯಾದ ಮಕ್ಕಳು ನಾಳೆ ಜನಾಂಗಕ್ಕೆ ದೊರಕುತ್ತಾರೆ. ವಿದ್ಯೆಯಿಂದಾಗುವ ಪರಿಣಾಮವನ್ನು ನಿಧಾನವಾಗಿ ಗಮನಿಸಿದರೂ ಅದು ಶಾಶ್ವತವಾದದ್ದಾಗಿರುತ್ತದೆ. ಅದ್ದರಿಂದಲೇ ಜೀನಿಯರು ಹೇಳುತ್ತಾರೆ- "ಒಂದು ವರ್ಷದ ಫಲ ಬೇಕಾದರೆ ಧಾನ್ಯದ ಬೀಜವನ್ನು ಬಿತ್ತು. ಹತ್ತು ವರ್ಷದ ಫಲ ಬೇಕಾದರೆ ಹಣ್ಣಿನ ಬೀಜವನ್ನು ಬಿತ್ತು, ಸಾವಿರ ವರ್ಷದ ಫಲ ಬೇಕಾದರೆ ವಿದ್ಯೆಯ ಬೀಜವನ್ನು ಬಿತ್ತು." ಇದು ಎಷ್ಟು ಸಮಂಜಸವಾದ ನಾಣ್ಣುಡಿ!

ಈ ಕಾರಣಗಳಿಂದಲೇ ಸರಕಾರವು ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಡ್ಡಾಯ ಶಿಕ್ಷಣವನ್ನಾಗಿ ಮಾಡಿದೆ. ಕ್ರಿ. ಶ ೧೯೬೨ ರಲ್ಲಿ ಕಡ್ಡಾಯ ಶಿಕ್ಷಣ ಜಾರಿಗೆ ಬಂದರೂ ಮೇಲ್ಕಾಣಿಸಿದ ಹಾಗೂ ಮುಂದೆ ಕಾಣಿಸಿದ ಕಾರಣಗಳಿಂದ ಅದು ಯಶಸ್ವಿಯಾಗಿಲ್ಲ. ಕಡ್ಡಾಯ ಶಿಕ್ಷಣದ ಪ್ರಕಾರ ಶಾಲೆಗೆ ಮಗುವನ್ನು ಪೋಷಕರು ಕಳುಹಿಸದೇ ಹೋದಲ್ಲಿ ಕಾಯದೆ ಪ್ರಕಾರ ಕ್ರಮವನ್ನು ತೆಗೆದುಕೊಳ್ಳಬಹುದು. ಆದರೆ ಈ ಕ್ರಮ ತೆಗೆದುಕೊಳ್ಳುವದನ್ನು ನಾವು

ಕಡ್ಡಾಯವಾಗಿ ಅನುಸರಿಸಿಲ್ಲ. ಕಾರಣ, ಪ್ರೀತಿ ವಿಶ್ವಾಸದಿಂ
ಶಾಲೆಗೆ ಮಗುವನ್ನು ಕಳುಹಿಸಿಕೊಡಬೇಕಾದ ತಂದೆ ತಾಯಿಗಳಲ್ಲಿ
ಶಾಲೆಯ ವಿಷಯವಾಗಿ ದ್ವೇಷದ ಭಾವನೆ ಮೂಡಬಾರದು. ಅ
ದ್ವೇಷದ ಭಾವನೆ ಮೂಡಿದರೆ ಉದ್ದೇಶವೆಲ್ಲ ನಿರರ್ಥಕವಾ
ಗುತ್ತದೆ.

ಶಾಲೆಯ ಹಾಗೂ ಶಿಕ್ಷಕನ ಸ್ನೇಹಿತನಾಗಬೇಕಾಗಿರುವ
ಪೋಷಕನು ಶತ್ರುವಾಗಿ ಶಾಲೆಯ ಜೊತೆಯಲ್ಲಿ ಅಸಹಾಕಾರ
ಮನೋಭಾವವನ್ನು ತಳೆದಾನು ಎಂಬ ಭಾವನೆಯಿಂದ ಕಡ್ಡಾಯ
ಶಿಕ್ಷಣದಲ್ಲಿ ತೋರಿಸಿರುವ ಉಗ್ರ ಕ್ರಮಗಳನ್ನು ಶಾಲೆಗೆ ಮಕ್ಕಳನ್ನು
ಕಳುಹಿಸದ ತಂದೆ ತಾಯಿಗಳ ಮೇಲೆ ತೆಗೆದುಕೊಳ್ಳಲಾಗುತ್ತಿಲ್ಲ
ಇದೊಂದು ಬಿಡಿಸಲಾರದ ಸಮಸ್ಯೆಯಾಗಿದೆ.

## ೩ ಶಿಕ್ಷಣದ ಮಟ್ಟ

ಕೆಲವರ ಅಭಿಪ್ರಾಯದ ಪ್ರಕಾರ ಶಿಕ್ಷಣದ ಮಟ್ಟ
(ಪ್ರಾಥಮಿಕ ಹಂತವನ್ನೂ ಸೇರಿಕೊಂಡು) ಕೆಳಗೆ ಇಳಿಯುತ್ತಿದೆ
ಈ ಅಭಿಪ್ರಾಯವನ್ನು ತಳ್ಳಿಹಾಕುವಂತಿಲ್ಲ. ಶಿಕ್ಷಣದಲ್ಲಿ ಇನ್ನೂ
ಅನೇಕ ಪರಿಹರಿಸಲಾಗದ ಜಟಿಲ ಸಮಸ್ಯೆಗಳಿವೆ. ಹಿಂದೆ ಕೊಡ
ತ್ತಿದ್ದ ವಿದ್ಯಾಭ್ಯಾಸ ಕೇವಲ ಕೆಲವರಿಗೆ ಮಾತ್ರವಿತ್ತು. ಅರಿ
ತಂದ ಕೆಲವು ಚತುರರಿಗೆ ಮಾತ್ರ ವ್ಯಾಸಂಗ ನಡೆಯುತ್ತಿತ್ತು
ಪುರಾಣದ ಕಾಲದಲ್ಲಿ ಸಹ ಕೇವಲ ಅರಸು ಮಕ್ಕಳಿಗೆ ವಿಶಿಷ್ಟವಾಗ

ದವರಿಗೆ ಮಾತ್ರ ವಿದ್ಯಾಭ್ಯಾಸವಿತ್ತು. ಹಾಗೆಯೇ ಇತಿಹಾಸ ಕಾಲ ದಲ್ಲೂ ತಕ್ಷಶಿಲ, ನಾಲಂದ, ವಿಕ್ರಮಶೀಲಾ ಇಂತಹ ವಿದ್ಯಾ ಧಾಮಗಳಲ್ಲಿ ಕೇವಲ ಪಂಡಿತೋತ್ತಮರಿಗೆ ಮಾತ್ರ ವ್ಯಾಸಂಗಕ್ಕೆ ಅವಕಾಶವಿತ್ತು. ಬ್ರಿಟಿಷರ ಕಾಲದಲ್ಲಿ ವಿಸ್ತಾರವಾದ ಸಾಮ್ರಾಜ್ಯದ ಲೆಕ್ಕಪತ್ರಗಳನ್ನು ತಯಾರು ಮಾಡುವಂತಹ ಲೆಕ್ಕಿಗರನ್ನು ತಯಾರು ಮಾಡುವ ಮೂರು 'ಆರ್'ಗಳ (Three R's) ವಿದ್ಯಾಭ್ಯಾಸವಿತ್ತು. ಆದರೆ ಸ್ವಾತಂತ್ರ್ಯಾನಂತರ ಸಂಪೂರ್ಣ ಪ್ರಭುತ್ವಸಂಪನ್ನ ಲೋಕತಂತ್ರಾತ್ಮಕ ಗಣರಾಜ್ಯವನ್ನು ಸ್ಥಾಪಿಸ ಲಾಯಿತು. ಅನಂತರ ಎಲ್ಲ ಜನರು ವಿದ್ಯಾಭ್ಯಾಸ ಮಾಡಿ ರಾಷ್ಟ್ರದ ಹೊರೆಯನ್ನು ಹೊರಬೇಕಾಗಿರುವದರಿಂದ ಪ್ರಜೆಗಳೇ ಪ್ರಜಾ ಪ್ರಭುತ್ವದ ಪ್ರಭುಗಳಾಗಿರುವದರಿಂದ. ರಾಷ್ಟ್ರದ ಆಗು ಹೋಗು ಗಳನ್ನು ನೋಡಿಕೊಳ್ಳುವ ಪ್ರತಿಯೊಬ್ಬ ಪ್ರಜೆಯೂ ವಿದ್ಯಾವಂತ ನಾಗಬೇಕಾಗಿದೆ. ಆದ್ದರಿಂದ ಸರ್ವರಿಗಾಗಿ ಇರುವ ವಿದ್ಯಾಭ್ಯಾಸ ದಲ್ಲಿ (Mass education) ಸ್ವಲ್ಪ ವ್ಯತ್ಯಾಸಗಳಾಗಬಹುದು. ಸಾಮಾನ್ಯ ಪ್ರಜೆಯ ಮಗುವೂ ನಿರೀಕ್ಷಿಸಿದ ಮಟ್ಟಕ್ಕೆ ಏರದಿರ ಬಹುದು. ಅಷ್ಟೇ ಅಲ್ಲದೆ ಮನೆಯಲ್ಲಿ ವಿದ್ಯಾಭ್ಯಾಸಕ್ಕೆ ಅನು ಕೂಲಕರವಾದ ವಾತಾವರಣವಿಲ್ಲದೇ ಇರಬಹುದು. ಅಥವಾ ಕಲಿಯುವಾಗ ನಿಧಾನ ಕಲಿಕೆಯ (Slow learn) ಮಕ್ಕಳ ಗುಂಪು ಇರುತ್ತದೆ. ಜಾಣ ಹುಡಗರ ಗುಂಪೂ (Gifted Students) ಇರುತ್ತದೆ. ಆದ್ದರಿಂದ ಕಲಿಯುವ ವಿದ್ಯೆಗನುಗುಣವಾಗಿ ಪಾಠ ಕಲಿಸಬಹುದು. ಈ ದೋಷವನ್ನು ತೊಡೆದು ಹಾಕಲು ದತ್ತು ಸ್ವೀಕಾರ (Tragging Systiem or Adoption Method)

ಪದ್ಧತಿಯನ್ನು ಅನುಸರಿಸಿ ಚತುರ ಹುಡುಗನೊಂದಿಗೆ ಕಲಿಸಿದರೆ ಸಾಮಾನ್ಯ ವಿದ್ಯಾರ್ಥಿಯ ಮಟ್ಟ ಹೆಚ್ಚುತ್ತದೆ. ಅಸಾಮಾನ್ಯತೆ ತೊಲಗುತ್ತದೆ. ಶಿಕ್ಷಣ ಮಟ್ಟ ಸುಧಾರಿಸುತ್ತದೆ.

'ಪ್ರಾಥಮಿಕ ವಿದ್ಯಾಭ್ಯಾಸದ ಮಟ್ಟ ಇಳಿದಿದೆ'. ಎಂಬ ಕೂಗು ಅಲ್ಲಲ್ಲಿ ಕೇಳಬರುತ್ತಿದೆ. ಆದರೆ ವಿಚಾರಿಸಿ ನೋಡಿದರೆ ವಿದ್ಯಾಭ್ಯಾಸದ ಮಟ್ಟ ಇಳಿದಿಲ್ಲ. ಪಠ್ಯಪುಸ್ತಕಗಳಲ್ಲಿ ನಿಗದಿ ಮಾಡಿರುವ ಬೋಧನಾಂಶದ ಮಟ್ಟವೂ ಇಳಿದಿಲ್ಲ. ಮೇಲಾಗಿ ಈಗಿರುವ ಪ್ರಾಥಮಿಕ ಶಿಕ್ಷಣದ ಪಠ್ಯಪುಸ್ತಕಗಳ ವಿಷಯ ಅಂದಿನ ಹೈಸ್ಕೂಲು ವಿದ್ಯಾರ್ಥಿಗಳು ಅಧ್ಯಯನ ಮಾಡುವ ಕೆಲವು ವಿಷಯಗಳನ್ನೊಳಗೊಂಡಿದೆ. ಆದರೆ ಕಲಿಯುವಿಕೆಯಲ್ಲಿ ಮಟ್ಟ ಇಳಿದಿರಬಹುದು. ಅದಕ್ಕೆ ಅನೇಕ ಕಾರಣಗಳಿವೆ. ಹಿಂದಿನ ಹಾಗೆ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಗಿಲ್ಲ.ಬಹಳ ಹೆಚ್ಚಿದೆ. ಹಿಂದಿನ ಕಾಲದಲ್ಲಿ ಕೇವಲ ಓದುವ ಆಸಕ್ತಿಯುಳ್ಳ, ಆಯ್ಕೆಮಾಡಿದ ಕೆಲವು ಜಾಣ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡಲಾಗುತ್ತಿತ್ತು. ಕಲಿಯುವ ವಿದ್ಯಾರ್ಥಿಗೆ ಆಸಕ್ತಿಯಿತ್ತು. ಗುರುವನ್ನು ಅವರು ಪೂಜ್ಯಭಾವದಿಂದ ಕಾಣುತ್ತಿದ್ದರು. ಗುರುಗಳೂ ಸಹ ಅದೇ ಭಾವನೆಯಿಂದ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು. ಆದರೆ ಈಗ ಕಡ್ಡಾಯ ಶಿಕ್ಷಣ ಜಾರಿಗೆ ಬಂದ ಮೇಲೆ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಪ್ರತಿಯೊಬ್ಬ ಪ್ರಜೆಯೂ ವಿದ್ಯಾವಂತನಾಗಬೇಕೆಂಬ ನಿಯಮಗಳಿರುವದರಿಂದ ಪ್ರಾಥಮಿಕ ಶಾಲೆಗಳಲ್ಲಿ ಕಡ್ಡಾಯ ಶಿಕ್ಷಣ ಜಾರಿಯಲ್ಲಿದೆ. ಹಾಗೂ ಪ್ರೌಢಶಿಕ್ಷಣವು ಉಚಿತವಾಗಿದೆ. ಇದ್ದರಿಂದ ಮಕ್ಕಳ

ಸಂಖ್ಯೆಯು ಹೆಚ್ಚಾಗಿ ಕಲಿಯುವಿಕೆಯ ಗುಣಮಟ್ಟ ಸ್ವಲ್ಪ ಮಟ್ಟಿಗೆ ಕೆಳಗಿಳಿದಿದೆ, ಎಂದು ಕೆಲವರ ಅಭಿಪ್ರಾಯ. ಇದಕ್ಕೆ ಕಾರಣಗಳಿಲ್ಲದಿಲ್ಲ. ಶಾಲೆಗೆ ಸೇರಿದ ವಿದ್ಯಾರ್ಥಿಗಳೆಲ್ಲಾ ಒಂದೇ ಮಟ್ಟದ ಪ್ರತಿಭೆಯಿಂದ ಕೂಡಿದವರೆಂದು ಊಹಿಸಲು ಸಾಧ್ಯವಿಲ್ಲ. ಕೆಲವು ವಿದ್ಯಾರ್ಥಿಗಳು ವಿದ್ಯಾವಂತ ಕುಟುಂಬದಿಂದ ಬಂದಿರುತ್ತಾರೆ. ಮತ್ತೆ ಕೆಲವು ವಿದ್ಯಾರ್ಥಿಗಳು ಅವಿದ್ಯಾವಂತ ಕುಟುಂಬಗಳಿಂದ ಬಂದವರಿರುತ್ತಾರೆ. ಶಾಲೆಯಲ್ಲಿ ಬೋಧಿಸುವದರ ಜೊತೆಗೆ ಮನೆಯಲ್ಲಿ ಅವರಿಗೆ ತಂದೆ ತಾಯಿಗಳೂ ಬೋಧಿಸುತ್ತಾರೆ. ಶಾಲೆಯಲ್ಲಿ ಕಲಿತದ್ದನ್ನು ಪುನರಾವರ್ತಿಸುತ್ತಾರೆ. ಶಾಲೆಗೆ ಹೋಗಲು ಪೂರ್ವಭಾವಿ ತರಬೇತಿಯನ್ನು ಮನೆಯಲ್ಲಿ ಕೊಡುತ್ತಾರೆ. ಅಂತಹ ಮಕ್ಕಳಿಗೆ ಕಲಿಸಲು ಶಿಕ್ಷಕರಿಗೆ ಕಡಿಮೆ ಶ್ರಮಬೇಕಾಗುತ್ತದೆ. ಅಲ್ಲದೇ ಅಂತಹ ಮಕ್ಕಳಿಗೆ ರೇಡಿಯೋ ವರ್ತಮಾನ ಪತ್ರಿಕೆ ಇತ್ಯಾದಿ ಸೌಲಭ್ಯಗಳಿರುವದರಿಂದ ಶಾಲೆಗಿಂತ ಉತ್ತಮವಾದ ಮನೆಯ ವಾತಾವರಣವೇ ಅವರಿಗೆ ತರಬೇತಿ ಕೊಡುತ್ತದೆ. ಜಾಣರಾಗುವದು ಅಂತಹ ಮಕ್ಕಳಿಗೆ ಬಹು ಸುಲಭ. ಆದರೆ ಅವಿದ್ಯಾವಂತ ತಂದೆತಾಯಿಗಳಿಂದ ಅಥವಾ ಕುಟುಂಬದಿಂದ ಬರುವ ವಿದ್ಯಾರ್ಥಿಗಳಿಗೆ ಈ ಸೌಲಭ್ಯ ದೊರಕುವದಿಲ್ಲ. ಅಲ್ಲದೇ ಬಡ ಕುಟುಂಬದವರಿಗೆ ರೇಡಿಯೋ ಪತ್ರಿಕೆಗಳ ಸೌಲಭ್ಯವೂ ಇರುವದಿಲ್ಲ. ಸ್ವಾಭಾವಿಕವಾಗಿ ಅಂತಹ ಸನ್ನಿವೇಶದಲ್ಲಿ ಬೆಳೆದ ಮಕ್ಕಳು ಹಿಂದುಳಿದವುಗಳಾಗುತ್ತವೆ.

ಅವರಿಗೆ ಹೆಚ್ಚಿನ ಆಸಕ್ತಿಯನ್ನು ಶಿಕ್ಷಕರು ತೋರಿಸಬೇಕಾಗುತ್ತದೆ. ಒಂದೇ ತರಗತಿಯಲ್ಲಿ ಮೇಲ್ಕಂಡ ಎರಡು ಬಗೆಯ

ವಿದ್ಯಾರ್ಥಿಗಳು ಸೇರಿದರೆ ತರತಮ ಬುದ್ಧಿಮಟ್ಟ ವಿದ್ಯಾರ್ಥಿ ಮಿಶ್ರಿತ ತರಗತಿಗಳೆಂದು (Hetrogeneous) ಕರೆಯುತ್ತೇವೆ. ಇಂತಹ ತರಗತಿಯಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳು (Giftd Students) ಮತ್ತು ಮಂದಗತಿಯಲ್ಲಿ ಕಲಿಯುವ ವಿದ್ಯಾರ್ಥಿ (Slow Learners) ಇಬ್ಬರೂ ಸೇರಿರುತ್ತಾರೆ. ಆಗ ಎರಡು ತರಪದ ಮಕ್ಕಳಿಗೆ ಅಭ್ಯಾಸ ಮಾಡಿಸುವದು ಕಠಿಣವಾದ ಕಾರ್ಯ. ಕಾರಣ ೮೦% ಅಂಕಗಳನ್ನು ಪಡೆಯುವ ವಿದ್ಯಾರ್ಥಿಗಳು ೧೦% ಅಥವಾ ೧೫% ಅಂಕಗಳನ್ನು ಪಡೆಯುವ ವಿದ್ಯಾರ್ಥಿಗಳ ಜೊತೆ ಯಲ್ಲಿ ಅಧ್ಯಯನ ಮಾಡಿದರೆ ಈ ಇಬ್ಬರಿಗೂ ಹೊಂದುವಂತಹ ವಿಷಯವನ್ನು ಹೇಳುವದು ಕಠಿಣವಾಗುತ್ತದೆ.

೭೦% ೮೦% ಅಂಕಗಳನ್ನು ತೆಗೆದುಕೊಳ್ಳುವ ಜಾಣ ವಿದ್ಯಾರ್ಥಿಗಳಿಗೆ ಹೇಳುವ ವಿಷಯ ೧೦% ೧೫% ಅಂಕ ಪಡೆ ಯುವ ವಿದ್ಯಾರ್ಥಿಗೆ ಅರ್ಥವಾಗುವದಿಲ್ಲ.

ಕಲಿಯುವಿಕೆಯ ಗುಣಮಟ್ಟದ ಕ್ಷೀಣತೆಗೆ ಇದೂ ಒಂದು ಕಾರಣ. ಹಾಗೆಯೇ ಹಿಂದೆ ಹೇಳಿದ ಪಠ್ಯಪುಸ್ತಕಗಳಲ್ಲಿ ಬೋಧನಾ ವಿಷಯವನ್ನು ಹೆಚ್ಚಿಸಿದ ಹಾಗೆ ಅದನ್ನು ಯಶಸ್ವಿಯಾಗಿ ವಿದ್ಯಾರ್ಥಿಗಳಿಗೆ ತಿಳಿಸಿ ಹೇಳುವ ಶಿಕ್ಷಕನ ವಿದ್ಯಾಮಟ್ಟವೂ ಸಹ ಏರಬೇಕು. ಉತ್ತಮ ಮಟ್ಟದ ವಿದ್ಯಾವಂತ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಬೇಕು. ಅಷ್ಟೇ ಅಲ್ಲದೆ ಈಗಾಗಲೇ ನೇಮಕ ವಾಗಿರುವ ಶಿಕ್ಷಕರಿಗೆ ಸೇವಾ ಮಧ್ಯಂತರ In Service).ತರಬೇತಿ ಕೊಡಬೇಕು. ಅವರ ವಿದ್ಯಾಗುಣಮಟ್ಟವನ್ನು ಹೆಚ್ಚಿಸಬೇಕು.

ಇವೆಲ್ಲವುಗಳಿಂತ ಮಿಗಿಲಾಗಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸ ಬೇಕೆಂಬ ಆ ಊರಿನ ಆಕಾಂಕ್ಷೆ ಅತಿ ಮುಖ್ಯವಾದದ್ದು. ಇದಿಲ್ಲದೆ ಹೋದರೆ ಎಷ್ಟೇ ವಿದ್ಯೆ ಇದ್ದರೂ ಎಂತಹ ಸೌಲಭ್ಯ-ವಿದ್ದರೂ ನಿರರ್ಥಕ. ಇಂತಹ ಉತ್ಸಾಹಾಕಾಂಕ್ಷೆ ಇರುವವರನ್ನೇ ಶಿಕ್ಷಕರನ್ನಾಗಿ ಆರಿಸುವದು ಕಷ್ಟಕರವಾದ ವಿಷಯವಾದರೂ ಅಸಾಧ್ಯ ವಾದುದೇನಲ್ಲ.

## ೪. ಶಾಲಾ ಕಟ್ಟಡ

ಶಿಕ್ಷಣದ ಮಟ್ಟವನ್ನು ಸುಧಾರಿಸಬೇಕಾದರೆ ಶಾಲೆಯನ್ನು ಆಕರ್ಷಕವಾಗಿಡುವದು ಒಂದು ಮುಖ್ಯ ಕಾರ್ಯ. ಮಗು ಶಾಲೆಗೆ ಬಂದ ತಕ್ಷಣವೇ ಅದರ ಮನಸ್ಸನ್ನು ಆಕರ್ಷಿಸುವ ಸುಂದರ ಸನ್ನಿವೇಶವನ್ನು ಶಾಲೆಯ ಹೊರಗೆ ಒಳಗ ಸೃಷ್ಟಿಸುವದು ಅತಿ ಅವಶ್ಯಕ. ಶಾಲಾ ಕಟ್ಟಡವಿಲ್ಲದೇ ಈಗ ಶಾಲೆಗಳನ್ನು ನಾನಾ ಸ್ಥಳಗಳಲ್ಲಿ ನಡೆಸಲಾಗುತ್ತಿದೆ. ಕೆಲವು ಶಾಲೆಗಳಿಗೆ ಸುಂದರ ಕಟ್ಟಡಗಳಿವೆ. ಕೆಲವು ಕಟ್ಟಡಗಳು ಮುರಿದು ಬೀಳುವ ಪರಿಸ್ಥಿತಿಯಲ್ಲಿವೆ. ಇವುಗಳ ರಿಪೇರಿ ಮಾಡಿಸಬೇಕಾದರೇನೆ ಹೊಸ ಶಾಲಾ ಕಟ್ಟಡವನ್ನು ಕಟ್ಟಿಸುವಷ್ಟು ಹಣ ಬೇಕಾಗುತ್ತದೆ. ಇನ್ನೂ ಕೆಲವು ಕಟ್ಟಡಗಳು ಬಾಡಿಗೆಯವುಗಳಾಗಿವೆ. ಈ ಬಾಡಿಗೆ ಕಟ್ಟಡಗಳಲ್ಲಿ ಕೆಲವು ಉತ್ತಮವಾಗಿವೆ, ಕೆಲವು ಉತ್ತಮವಾಗಿಲ್ಲ. ಅವುಗಳ ರಿಪೇರಿಯನ್ನು ಸರಕಾರ ಮಾಡಿಸುವ ಹಾಗಿಲ್ಲ. ಇವುಗಳ ಮಾಲಿಕರಾದ ಖಾಸಗಿ

ವ್ಯಕ್ತಿಗಳು ಆ ಕಟ್ಟಡವನ್ನು ರಿಪೇರಿ ಮಾಡಿಕೊಡಲು ಸಿದ್ಧರಿಲ್ಲ
ಅವರು ಬಾಡಿಗೆಗೆ ಕೊಟ್ಟ ಕೊಠಡಿಗಳನ್ನು ಖಾಲಿ ಮಾಡುವಂತೆ
ಹೇಳುತ್ತಾರೆ. ಅವುಗಳನ್ನು ಖಾಲಿ ಮಾಡಲೆಂದೇ ಅವರು ಶಾಲಾ
ಕಟ್ಟಡಗಳನ್ನು ಮತ್ತೂ ಶಿಥಿಲಗೊಳಿಸುತ್ತಾರೆ.

ಆ ಶಿಥಿಲವಾದ ಶಾಲಾ ಕಟ್ಟಡವನ್ನು ಬಿಟ್ಟರೆ ಬೇರೆ ಶಾಲಾ
ಕಟ್ಟಡಗಳು ಆ ಸ್ಥಳಗಳಲ್ಲಿ ದೊರಕುವದಿಲ್ಲ. ಸಹಸ್ರಾರು
ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಆದರಿಂದ ಬಹಳ ತೊಂದರೆಯಾ
ಗುತ್ತದೆ; ಮಕ್ಕಳ ಶಿಕ್ಷಣಕ್ಕಾಗಿ ಉತ್ತಮ ಕಟ್ಟಡಗಳು ದೊರಕ
ದಿರುವದು ನಮ್ಮ ದೌರ್ಭಾಗ್ಯವೇ ಸರಿ. ಇಂದಿನ ಹಣದ ಯುಗ
ದಲ್ಲಿ ಹಣವನ್ನು ಗಳಿಸುವ ಹಪಾಹಪಿಯಿಂದ ಖಾಸಗಿ ವ್ಯಕ್ತಿಗಳು
ಶಾಲೆಗಳಿಗ ಕೊಡುವದಕ್ಕಿಂತ ವ್ಯಾಪಾರ ಮಾಡುವವರಿಗೆ ಕೊಟ್ಟರೆ
ಹೆಚ್ಚು ಭಾಡಿಗೆ ಬರುತ್ತದೆ ಎಂದು ಯೋಚಿಸುವದು ಸ್ವಾಭಾವಿಕ
ವಾಗಿದೆ. ಅಷ್ಟೇ ಅಲ್ಲದೆ ನಗರಗಳಲ್ಲಿ ಬಾಡಿಗೆಗ ಕಟ್ಟಡಗಳು ಸಿಕ್ಕದೆ
ತರಗತಿಗಳನ್ನು (ಸಿಪ್ಟ) ಪಾಳಿಯ ಪ್ರಕಾರ ನಡೆಸುತ್ತಿರುವದಾಗಿದೆ.
ಇದರಿಂದ ವಿದ್ಯಾರ್ಥಿಗಳಿಗೆ ಎಷ್ಟು ಕಾಲ ವಿದ್ಯಾಭ್ಯಾಸ ಮಾಡಿಸ
ಬೇಕೋ ಅಷ್ಟು ಕಾಲ ಮಾಡಿಸಲು ಸಾಧ್ಯವಿಲ್ಲದಾಗಿದೆ. ಇದ
ರಿಂದ ಕಲಿಯುವಿಕೆಯಲ್ಲಿಯೂ ಭಾರೀ ದುಷ್ಪರಿಣಾಮ ಉಂಟಾ
ಗಿದೆ. ಮುಂಜಾನೆ ಸಮಯ ಕೆಲವು ವಿದ್ಯಾರ್ಥಿಗಳು ಶಾಲೆಯಲ್ಲಿ
ದ್ದರೆ ಮಧ್ಯಾಹ್ನದ ವೇಳೆಯಲ್ಲಿ ಬಹುತೇಕ ವಿದ್ಯಾರ್ಥಿಗಳು ಉಡಾ
ಳರ ಜೊತೆ ಸೇರಿ ಕಲಿಯುವದರ ಕಡೆ ಲಕ್ಷ್ಯವಹಿಸುವದಿಲ್ಲ.
ವಿದ್ಯಾರ್ಥಿ ತನ್ನ ಕಲಿಯುವಿಕೆಯ ಮಟ್ಟವನ್ನು ತಾನೇ ಕಡಿಮೆ
ಮಾಡಿಕೊಳ್ಳುತ್ತಾನೆ. ಅಲ್ಲದೆ ಅವನ ನೀತಿ–ನಡಾವಳಿಕೆಯಲ್ಲಿ

ಬಹಳ ಬದಲಾವಣೆಯಾದುದು ಕಂಡು ಬರುತ್ತದೆ. ಪ್ರಾತಃಕಾಲ ಹಾಗು ಸಾಯಂಕಾಲ ಮಕ್ಕಳು ಶಾಲೆಯಲ್ಲಿರುವಂತಹ ವ್ಯವಸ್ಥೆ ಯಾಗಬೇಕಾದರೆ ಈ ಪಾಳಿ ಪದ್ಧತಿ ಹೋಗಬೇಕು. ಪ್ರತಿ ಯೊಂದು ಶಾಲೆಗೂ ತನ್ನದೇ ಆದ ಪ್ರತ್ಯೇಕ ಕಟ್ಟಡ ಬೇಕಾಗು ತ್ತದೆ. ಇದಕ್ಕಾಗಿ ನಗರ ಪಿತೃಗಳು ಹಾಗೂ ಶಿಲ್ಪಿಗಳಲ್ಲಿ ಶಿಕ್ಷಣ ಇಲಾಖೆಯ ಸವಿನಯ ಪ್ರಾರ್ಥನೆ ಏನೆಂದರೆ ನಗರಗಳನ್ನು ವಿಸ್ತರಿ ಸುವ ಸಮಯದಲ್ಲಿ ಬಡಾವಣೆಗಳನ್ನು ನಿರ್ಮಿಸುವ ಕಾಲದಲ್ಲಿ ನಾಗರಿಕರ ಸೌಲಭ್ಯಕ್ಕಾಗಿ ಕಡ್ಡಾಯ ಶಿಕ್ಷಣದ ನಿಯಮಾವಳಿಗಳನ್ನು ಅನುಷ್ಠಾನಕ್ಕೆ ತರುವದಕ್ಕಾಗಿ ಶಾಲಾಕಟ್ಟಡಗಳ ನಿರ್ಮಾಣಕ್ಕಾ ಗಿಯೇ ಕೆಲವು ನಿವೇಶನಗಳನ್ನು ಶಿಕ್ಷಣ ಇಲಾಖೆಗೆ ಕೊಡಬೇಕು. ಕಡ್ಡಾಯ ಶಿಕ್ಷಣ ಸಂವಿಧಾನದ ಪ್ರಕಾರ ಪ್ರತಿಯೊಬ್ಬ ಶಿಶುಪ್ರಜೆಗೂ ಕಡ್ಡಾಯವಾಗಿ ದೊರಕಿಸಬೇಕಾಗಿರುವ ಸೌಲಭ್ಯವಾಗಿರುವದರಿಂದ ಈ ರೀತಿ ನಿವೇಶನವನ್ನು ಶಾಲಾಕಟ್ಟಡದ ನಿರ್ಮಾಣಕ್ಕೆ ಕೊಡು ವದು ಅನಿವಾರ್ಯ.

## ೫ ಆಟದ ಮೈದಾನ

ಸದ್ಯದ ಸ್ಥಿತಿಯಲ್ಲಿ ಮಕ್ಕಳಿಗೆ ಆಟದ ಮೈದಾನವಿಲ್ಲ. ಆಟದ ಮೂಲಕ ಪಾಠ ಕಲಿಸಬೇಕು. ಆಟ ಪಾಟ ಇಲ್ಲದಿರುವದು

ಮಕ್ಕಳ ಆರೋಗ್ಯದ ಮೇಲೆ ಮಾತ್ರವಲ್ಲದೇ ಕಲಿಯುವಿಕೆಯ ಮೇಲೂ ಭಾರೀ ದುಷ್ಪರಿಣಾಮವನ್ನುಂಟುಮಾಡುತ್ತದೆ. ಆರೋಗ್ಯದಿಂದ ಇರುವ ಶರೀರದಲ್ಲಿ ಆರೋಗ್ಯವಾಗಿರುವ ಮನಸ್ಸು ಇರುತ್ತದೆ. ( A Sound mind in a sound body ) ತನ್ನ ಸಹಪಾಠಿಗಳೊಡನೆ ಪ್ರಪಂಚವನ್ನೇ ಮರೆತು ಆಟದಲ್ಲಿ ತಲ್ಲೀನನಾಗುವ ಮಗುವಿನ ಮನಸ್ಸು, ಬುದ್ಧಿ ಹಾಗೂ ದೇಹ ಇವುಗಳ ಸರ್ವಾಂಗೀಣ ಬೆಳವಣಿಗೆಗೆ ಪ್ರತಿಶಾಲೆಗೂ ಆಟದ ಮೈದಾನ ಮುಖ್ಯವಾದದ್ದು. ನಿಜವಾದ ಪ್ರಜಾಪ್ರಭುತ್ವ ನಿರ್ಮಿತವಾಗುವದು ಆಟದ ಮೈದಾನದಲ್ಲಿ. ಅಲ್ಲಿ ವಿದ್ಯಾರ್ಥಿಗಳು ಜಾತಿ ಭಾವನೆಯನ್ನು ಮರೆಯುವರು, ಶ್ರೇಷ್ಠ–ಕನಿಷ್ಠ ಭಾವನೆಗಳನ್ನು ಬದಿಗಿಡುವರು, ಬಡವ ಬಲ್ಲಿದನೆಂಬ ವಿಚಾರವನ್ನು ಅಲಕ್ಷಿಸುವರು. ಒಂದೇ ನಾಡಿನ ಮಕ್ಕಳಾಗಿ ಒಬ್ಬ ಮಾತೆಯ ಸಂತಾನದಂತೆ ಕ್ರೀಡಾಪಟುಗಳು ಸಂತೋಷವಾಗಿ ಆಡುವರು. ಮಕ್ಕಳ ಕ್ರೀಡಾಕೌಶಲ್ಯಕ್ಕೆ ಪ್ರಾಧಾನ್ಯತೆಯನ್ನು ನೀಡಬೇಕು. ವಾಸನಾಮಯ ಜಗತ್ತಿನ ಜಂಜಾಟವನ್ನು ಮರೆತು ಸ್ವರ್ಗೀಯ ಆನಂದವನ್ನು ಅನುಭವಿಸುವ ಪ್ರಜಾಪ್ರಭುತ್ವದ ತೊಟ್ಟಿಲಿನಂತಿರುವ ( Cardle of democracy ) ಆಟದ ಮೈದಾನವು ಮಾನಸಿಕವಾಗಿ ಆಧ್ಯಾತ್ಮಿಕವಾಗಿ ಹಾಗೂ ಶಾರೀರಿಕವಾಗಿ ಶಿಕ್ಷಣವನ್ನು ಕೊಡುವ ಒಂದು ಪವಿತ್ರ ಸ್ಥಳ. ಆಟದ ಮೈದಾನವೇ ಶಾಲೆಗೆ ಇಲ್ಲದಿದ್ದಲ್ಲಿ ಸುಪ್ತವಾಗಿರುವ ಪ್ರಜಾಪ್ರಭುತ್ವದ ಭಾವನೆಯನ್ನು ಸಚೇತನಗೊಳಿಸಲು ಅವಕಾಶವಿಲ್ಲದಂತಾಗುತ್ತದೆ. ಆಟಪಾಟಗಳಿಲ್ಲದಿದ್ದರೆ ಶಾಲೆಯಲ್ಲಿ ಹೇಳುವ ವಿಷಯಗಳಲ್ಲಿ ವಿದ್ಯಾರ್ಥಿಗಳಿಗೆ ಜಿಗುಪ್ಸೆಯುಂಟಾಗು

ತ್ತದೆ. ನಗರಗಳಲ್ಲಿ ಕೂಡ ಅನೇಕ ಶಾಲೆಗಳ ಮುಂದೆ ಆಟದ ಮೈದಾನವಿಲ್ಲದಿರುವದು ದೌರ್ಭಾಗ್ಯ. ಇನ್ನು ಹಳ್ಳಿಗಳ ಪರಿಸ್ಥಿತಿಯನ್ನು ನೋಡಿದರೆ ಇನ್ನೂ ಶೋಚನೀಯ. ಶಾಲಾ ಕಟ್ಟಡಗಳೇ ಅಲ್ಲಿ ಅನೇಕ ಕಡೆ ಇಲ್ಲ. ದೊಡ್ಡ ದೊಡ್ಡ ಶ್ರೀಮಂತರ ಮನೆಯ ಮುಂದಿನ ಜಗುಲಿ, ವಠಾರ, ಅಶ್ವತ್ಥ ವೃಕ್ಷದ ನೆರಳು, ಛತ್ರ, ಚಾವಡಿ ದೇವಸ್ಥಾನ ಇತ್ಯಾದಿಗಳು ನಮ್ಮ ಶಾಲೆಯನ್ನು ನಡೆಸುವ ಸ್ಥಳಗಳು. ಅಲ್ಲಿ ಶಾಲೆಯ ವಾತಾವರಣವೂ ಇಲ್ಲ. ಮಕ್ಕಳ ಮನಸ್ಸನ್ನು ಸ್ಫೂರ್ತಿಗೊಳಿಸುವ ಸಾಧನಗಳೂ ಇಲ್ಲ. ಧೂಳಿನಲ್ಲಿ ಅಥವಾ ಸಾರಿಸಿದ ನೆಲದ ಮೇಲೆ ಮಕ್ಕಳು ಕೂತು ಅಧ್ಯಯನವನ್ನು ಮಾಡುವ ಸನ್ನಿವೇಶವನ್ನು ನೋಡಿದರೆ ಹೃದಯ ಹಿಂಡಿದಂತಾಗುತ್ತದೆ. ಊರಿನವರೆಲ್ಲಾ ಶಾಲೆಯ ಮುಂದೆ ಹೋಗುವದನ್ನು ಅಲ್ಲೆ ನಿಂತು ವೀಕ್ಷಿಸುವದು; ತನ್ನ ಮಕ್ಕಳನ್ನು ಮನೆಗೆಲಸಕ್ಕೆ ಕರೆಯುವದು: ಶಿಕ್ಷಕರ ಜೊತೆಯಲ್ಲಿ ಅಡಿಕೆ, ಎಲೆ, ತಂಬಾಕು ಮೆಲ್ಲುವದು ಇತ್ಯಾದಿ ದೃಶ್ಯಗಳಿಗೇನೂ ಅಭಾವವಿಲ್ಲ. ಕಟ್ಟಡವಿಲ್ಲದಿದ್ದಲ್ಲಿ ಮಕ್ಕಳ ಮನಸ್ಸನ್ನು ಅಧ್ಯಯನದ ಕಡೆ ಹರಿಸುವ ಸಂದರ್ಭ ಕಡಿಮೆ. ನಗರಗಳಲ್ಲಿ ಆಟದ ಮೈದಾನವಿಲ್ಲದೇ ಸರಕು-ಮುರುಕು ಕಟ್ಟಡಗಳಲ್ಲಿ ಶಾಲೆ ನಡಿಸಿದರೆ ಹಳ್ಳಿಗಳಲ್ಲಿ ಹರಿದು ಮುರಿದ ಅಥವಾ ಕಟ್ಟಡವಿಲ್ಲದೇ ವಿದ್ಯಾಭ್ಯಾಸ ಮುಂದುವರಿಸಬೇಕಾಗಿದೆ. ಹಳ್ಳಿಗಳಲ್ಲಿ ಆಟದ ಮೈದಾನವಿದ್ದರೂ ಮಕ್ಕಳನ್ನು ಆಟವಾಡಲು ಬಿಡದೇ ಮನೆಗೆಲಸಕ್ಕೆ ಹಚ್ಚುವ ದೃಶ್ಯ ಕಂಡುಬರುತ್ತದೆ. ಆದ್ದರಿಂದ ಶಾಲಾಕಟ್ಟಡಗಳು ಇಲ್ಲದಿರುವದು ನಗರ ಹಾಗೂ ಹಳ್ಳಿಗಳಲ್ಲಿ ಕಂಡು ಬರುವ ಸಾಮಾನ್ಯ ಕೊರತೆ. ಅವುಗಳನ್ನು ದೊರಕಿಸುವದೊಂದು ಮಹಾಸಮಸ್ಯೆ.

# ೭. ಪೀಠೋಪಕರಣಗಳು

ಪೀಠೋಪಕರಣಗಳು ಶಾಲೆಗೆ ಅತಿ ಮುಖ್ಯವಾದವುಗಳು. ಶಾಲೆಯ ಮಕ್ಕಳು ನೆಲದ ಮೇಲೆ ಕುಳಿತು ಅಭ್ಯಾಸ ಮಾಡುವ ದನ್ನು ತಪ್ಪಿಸಬೇಕು. ಮಕ್ಕಳು ದೇವರ ಸಮಾನ. ಅವರನ್ನು ನೆಲದ ಮೇಲೆ ಕೂಡಿಸಿದರೆ ಮಕ್ಕಳ ಪಾವಿತ್ರ್ಯತೆಯನ್ನು ನಾವು ಕಾಯ್ದುಕೊಂಡ ಹಾಗಾಗುವದಿಲ್ಲ.

ಶಾಲೆಯನ್ನು ಆಕರ್ಷಣೀಯವಾಗಿಡುವದು ಅವಶ್ಯಕ. ಶಾಲೆಗೆ ಮಕ್ಕಳು ಬಂದ ಕೂಡಲೇ ಅಧ್ಯಯನಕ್ಕೆ ಸ್ಫೂರ್ತಿಯುತ ವಾದ ಸನ್ನಿವೇಶ ನಿರ್ಮಿಸುವದು ಮುಖ್ಯ ಕರ್ತವ್ಯ. ಕಲಿಯುವಿಕೆಯ ಕಡೆಗೆ ಗಮನಕೊಡಬೇಕಾದರೆ ಶಾಲೆಯ ವಾತಾವರಣ ಮುಖ್ಯ. ಶಾಲೆಯ ಮುಂದೆ ನಿಸರ್ಗದ ಸೃಜನವಾಗಬೇಕು. ಹೂಗಳಿಂದ ಸಸ್ಯಗಳಿಂದ ಕೂಡಿದ ಒಂದು ಸುಂದರ ತೋಟವಾಗಬೇಕು. ತೆಂಗಿನ ಗಿಡಗಳನ್ನು ಶಾಲೆಯ ಕಂಪೌಂಡಿನಲ್ಲಿ ಆಟದ ಮೈದಾನಕ್ಕೆ ಧಕ್ಕೆ ಬಾರದಂತೆ ಬೆಳೆಸಬೇಕು. ಪ್ರತಿಯೊಂದು ಶಾಲೆಯೂ ಶಾಂತಿ ನಿಕೇತನವಾಗಬೇಕು. ಮಕ್ಕಳು ನಿಸರ್ಗದ ಮಡಿಲಿನಲ್ಲಿ ಬೆಳೆಯ ಬೇಕು. ಪ್ರಕೃತಿಯ ಸೃಷ್ಟಿ–ಸೌಂದರ್ಯ ಮಕ್ಕಳ ಮನವನ್ನು ಸೆಳೆ ಯಬೇಕು. ಆರೋಗ್ಯಯುತವಾದ ತಂಗಾಳಿ ಮಾನಸಿಕ ಆಯಾಸ ವನ್ನು (mental fatigue) ಪರಿಹಾರ ಮಾಡುತ್ತದೆ. ಹಕ್ಕಿಗಳ ಹಸಿರು ಹೃದಯದ ಶ್ರೀಮಂತಿಕೆಯನ್ನು ಬೆಳೆಸುತ್ತದೆ. ಶಾಲೆಯ

ತ್ತಲೂ ಒಂದು ಉತ್ತಮವಾದ ನಿಸರ್ಗದ ದೃಶ್ಯ ಎಂತಹ ಮಕ್ಕಳ
ನ್ನಾದರೂ ಆಕರ್ಷಿಸದೇ ಇರಲಾರವು. ಸಸ್ಯ ಸಂಪತ್ತನ್ನು ಹೆಚ್ಚಿಸು
ವದರಿಂದ ಶಾಲೆಯ ಆರ್ಥಿಕ ಸಂಪತ್ತು ಹೆಚ್ಚುತ್ತದೆ. ಶಾಲೆಯ
ಳಗಿನ ಸನ್ನಿವೇಶವೂ ಸಹ ಉತ್ತಮಗೊಳ್ಳಬೇಕು. ಪುಸ್ತಕಗಳನ್ನು
ಇಡಲು ಕಪಾಟುಗಳು, ಬೀರುಗಳು, ಪೆಟ್ಟಿಗೆಗಳು ಬೇಕು. ವಿದ್ಯಾ
ಶಾಲೆಯು ಮಕ್ಕಳ ಸಾಹಿತ್ಯಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು,
ಕ್ಷಕರಿಗೆ ಸಂದರ್ಭ ಗ್ರಂಥಗಳನ್ನು (Reference book) ಹಾಗೂ
ಠ್ಯಪುಸ್ತಕಗಳನ್ನು ಒದಗಿಸುತ್ತದೆ. ಅವುಗಳನ್ನು ಸುರಕ್ಷಿತವಾಗಿ
ಡಲು ಕಪಾಟುಗಳು ಆವಶ್ಯಕ ಹಿಂದಿನ ಜನಾಂಗವು ಬುದ್ಧಿಶಕ್ತಿ,
ಜ್ಞಾನಶಕ್ತಿಯ ಬೆಳವಣಿಗೆಗೆ ಮುಂದಿನ ಜನಾಂಗಕ್ಕೆ ಕೊಡುಗೆಯ
ರೂಪದಲ್ಲಿ ಕೊಟ್ಟಿರುವ ಕಾಣಿಕೆಯೇ ಪುಸ್ತಕ ಭಾಂಡಾರ. ಇದು
ಶಾಲೆಯ ಮೆದುಳು. ಇದಿಲ್ಲದೇ ಹೋದಲ್ಲಿ ಶಾಲೆಗೆ ತಲೆಯೇ
ಇಲ್ಲವಂತಾಗುತ್ತದೆ. ಆದ್ದರಿಂದ ಶಾಲೆಯಲ್ಲಿ ಅತಿ ಮುಖ್ಯವಾಗಿ
ಪುಸ್ತಕ ಭಾಂಡಾರ ಬೇಕು. ಆಧುನಿಕ ಕಾಲದ ಸಂಶೋಧನೆಯನ್ನು
ಲಿತು ಹಾಗೂ ಇತರ ವಿಚಾರವಾಹಿನಿಗಳನ್ನು ಕುರಿತು ಗ್ರಂಥ
ಗಳನ್ನು ಶಿಕ್ಷಕರು ಅಧ್ಯಯನ ಮಾಡಬೇಕು. ಶಿಕ್ಷಕರಿಗೆ ಕುಳಿತು
ಕೊಳ್ಳಲು ಖುರ್ಚಿ–ಮೇಜು, ಮಕ್ಕಳಿಗೆ ನೀರು ಕುಡಿಯಲು
ಹೂಜಿ, ಮಕ್ಕಳಿಗೆ ಕೂಡಲು ಮಣೆ–ಮೊದಲಾದವುಗಳು ಶಾಲೆ
ಯನ್ನು ಆಕರ್ಷಣೀಯವಾಗಿ ಇಡಲು ಬೇಕೇ ಬೇಕು. ಶ್ರೀಮಂತ
ಶಾಲೆಗಳಲ್ಲಿ ಮಕ್ಕಳಿಗೆ ಕೂಡಲು ಬೆಂಚು ಹಾಗೂ ಸಣ್ಣ ಸಣ್ಣ
ರ್ಚಿಗಳಿರುತ್ತವೆ. ಆದರೆ ಸಾರ್ವಜನಿಕ ಶಾಲೆಗಳಲ್ಲಿ ಧೂಳಿನ
ಮೇಲೆ ಮಕ್ಕಳು ಕೂಡುತ್ತವೆ. ಅದರಲ್ಲೇ ಕುಳಿತು ಬಟ್ಟೆಬರೆಯ

ನ್ನೆಲ್ಲಾ ಹೊಲಸು ಮಾಡಿಕೊಳ್ಳುತ್ತವೆ. ಕೆಲವು ಶಾಲೆಗಳು ದನಗ
ಕೊಂಡವಾಡೆಯ ಹಾಗೆ ಕಾಣಿಸುತ್ತವೆ. ಶಾಲೆಗೆ ಬೇಕಾಗುವ
ಕೆಲವು ಸಾಮಾನುಗಳನ್ನು ಶಾಲಾ ಅಭಿವೃದ್ಧಿ ಸಮಿತಿಗಳಿಂದ ಪಡ
ಯಬೇಕು. ಶಾಲೆಗಳಿಗೆ ಬೇಕಾಗುವ ಇನ್ನಿತರ ಅವಶ್ಯಕ ವಸ್ತು
ಗಳನ್ನು ತಂದೆ ತಾಯಿಗಳಿಂದ ಪಡೆಯಬೇಕು. ತಂದೆ ತಾಯಿಗಳಿಗ
ಈ ಕೊಡುಗೆಯ ಆದ್ಯತೆಯನ್ನು ವಿವರಿಸಬೇಕು. ಅವರ ಮನ
ವೊಲಿಸಬೇಕು. ಯಾವ ಮಕ್ಕಳಿಗೋಸ್ಕರ ತಂದೆತಾಯಿಗಳು ಆಸ್ತಿ
ಯನ್ನು ಸಂಪಾದಿಸುತ್ತಾರೋ ಯಾರನ್ನು ದೊಡ್ಡ ವಿದ್ಯಾವಂತ
ರನ್ನಾಗಿ ಮಾಡಬೇಕೆಂದು ಭಾವಿಸಕೊಂಡಿರುತ್ತಾರೋ ಅಂತಹ
ಮಕ್ಕಳ ಅಭಿವೃದ್ಧಿಗೆ ಶಿಕ್ಷಕರು ಶ್ರಮಿಸುವರೆಂಬುದನ್ನು ಸ್ಪಷ್ಟಪಡಿ
ಸಬೇಕು. ಆಗ ತಂದೆತಾಯಿಗಳು ಹಿಂದುಮುಂದು ನೋಡದೇ
ತಮ್ಮ ಮಕ್ಕಳ ಅಭಿವೃದ್ಧಿಗಾಗಿ ಇರುವ ಶಾಲೆಗೆ ಬೇಕಾಗುವ
ಪೀಠೋಪಕರಣಗಳನ್ನು ಒದಗಿಸಬಹುದು. ಈ ಸಮಸ್ಯೆಗೆ ಪೂರ್ಣ
ಪರಿಹಾರವನ್ನು ಕಂಡುಹಿಡಿಯುವಲ್ಲಿ ಸರಕಾರವು ಮುಂದಾಗ
ಬೇಕು.

## ೮. ಪಾಠೋಪಕರಣಗಳು

ಪ್ರಾಥಮಿಕ ಶಾಲೆಗಳಲ್ಲಿ ಪೀಠೋಪಕರಣಗಳಷ್ಟೇ ಪಾಠೋಪ
ಕರಣಗಳೂ ಮುಖ್ಯವಾದವುಗಳು. ಪಾಠವನ್ನು ಸಮರ್ಪಕವಾಗಿ
ಮಕ್ಕಳಿಗೆ ಮನಮುಟ್ಟುವಂತೆ ಮಾಡಬೇಕಾದರೆ ಆ ಪಾಠಕ್ಕೆ

ಬಂಧಪಟ್ಟ ಉಪಕರಣಗಳು ಮುಖ್ಯವಾದವುಗಳು. ಇತಿಹಾಸದ ಠವನ್ನು ಆ ಐತಿಹಾಸಿಕ ವ್ಯಕ್ತಿಯ ಚಿತ್ರ, ಅವನ ಸಾಧನೆಗಳ ತ್ರ, ಅದಕ್ಕೆ ಸಂಬಂಧಪಟ್ಟ ಸ್ಥಳಗಳು ಇತ್ಯಾದಿ ಬೋಧನಾ ಲಕರಣೆಗಳ ಮೂಲಕ ಮಾಡಬೇಕು. ಕಾರಣವಿಷ್ಟೆ: ಇವುಗ ಂದ ಮಕ್ಕಳು ಯಾವುದನ್ನು ನೋಡುತ್ತಾರೋ ಅದು ಅಚ್ಚು ಒತ್ತಿದ ಹಾಗೆ ಅವರ ಮನಸ್ಸಿನ ಮೇಲೆ ಬೀಳುತ್ತದೆ. ತಾವು ೋಡಿದ್ದನ್ನು ಎಂದೆಂದೂ ಮರೆಯಲಾರರು. ಅದು ಅವರ ನಸ್ಸಿನ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ. ಆದರಿಂದ ಕ್ಕಳ ಮನೋಭಾವನೆಯಲ್ಲಿ ಬದಲಾವಣೆಯಾಗುತ್ತದೆ. ಅವರು ವಿಷಯದಲ್ಲಿ ಆಳವಾಗಿ ಆಲೋಚನೆ ಮಾಡಲು ಪ್ರಾರಂಭಿ ಸುತ್ತಾರೆ.

ಆಗ ಆ ವಿಷಯದ ಬಗ್ಗೆ ಮಗುವಿನಲ್ಲಿ ಹೆಚ್ಚು ಆಸಕ್ತಿ ಳೆಯುತ್ತದೆ. ಆ ವಿಷಯವನ್ನು ಅದು ಮುಂದೆ ತನ್ನ ಅಧ್ಯ ಯನದ ವಿಷಯವನ್ನಾಗಿ ಆರಿಸಿಕೊಳ್ಳುತ್ತದೆ. ಇದರಿಂದ ಶಿಕ್ಷಕರು ಮಾಡಿದ ಬೋಧನೆ ಸಫಲವಾಗುತ್ತದೆ. ಆಗ ವಿದ್ಯಾರ್ಥಿಯಲ್ಲಿ ಮರ್ಶಾತ್ಮಕ ಶಕ್ತಿ ಬೆಳೆಯುತ್ತದೆ. ಆ ವಿಷಯವನ್ನು ವೀಕ್ಷಿ ಸುವ ದೃಷ್ಟಿಕೋನದಲ್ಲಿ ಭಾರೀ ಪರಿವರ್ತನೆ ಕಾಣುತ್ತದೆ. ಅವನ ತಿ, ನುಡಿ ದೇಶಾಭಿಮಾನಗಳು ಸಮೃದ್ಧಿಯಾಗಿ ಬೆಳೆದು ವಿಪುಲ ದಲಾವಣೆ ಅವನಲ್ಲಿ ಕಾಣುತ್ತದೆ. ಆದ್ದರಿಂದ ಪಾಠೋಪಕರ ಗಳು ಕಲಿಯುವ ಮಟ್ಟವನ್ನು ಎತ್ತರಿಸುತ್ತವೆ. ಇದನ್ನು ದ್ಯಾರ್ಥಿಯಲ್ಲಾದ ಪರಿವರ್ತನೆಯಿಂದ ಅರಿಯಬಹುದು.

# ೯. ಗ್ರಂಥಾಲಯ ಮತ್ತು ಪ್ರಯೋಗಾಲಯಗಳು

ಶಾಲೆಗೆ ಹಿಂದೆ ಹೇಳಿದ ಹಾಗೆ ಗ್ರಂಥಾಲಯ ಮತ್ತು ಪ್ರಯೋಗಾಲಯಗಳು ಬಹು ಮುಖ್ಯ. ಗ್ರಂಥಾಲಯದ ಮಹತ್ವ ವನ್ನು ಹಿಂದೆ ಸ್ವಲ್ಪ ತಿಳಿದುಕೊಂಡಿದ್ದೇವೆ. ಪಠ್ಯಪುಸ್ತಕಗಳಲ್ಲಿ ವಿದ್ಯಾರ್ಥಿಗಳು ತಿಳಿಯಬೇಕಾದ ವಿಷಯವನ್ನು ಕೊಟ್ಟಿರುತ್ತದೆ. ಆದರೆ ಆ ವಿಷಯಗಳನ್ನು ಯಶಸ್ವಿಯಾಗಿ ವಿದ್ಯಾರ್ಥಿಗಳಿಗೆ ತಿಳಿಸ ಬೇಕಾದರೆ ಶಿಕ್ಷಕರಷ್ಟೇ ವಿಷಯವನ್ನು ಅರಿತಿದ್ದರೆ ಸಾಲದು. ಡಿ. ವಿ. ಗುಂಡಪ್ಪನವರು ಹೇಳಿದ ಹಾಗೆ "ಮನೆಯಷ್ಟು ವಿಷಯ ತಿಳಿದಿದ್ದರೆ ಮೊಳೆಯಷ್ಟನ್ನು ಮಾತ್ರ ಬೇರೆಯವರಿಗೆ ದಾನಮಾ ಡಲು ಸಾಧ್ಯ". ಶಿಕ್ಷಕರು ತಿಳಿದಿರುವ ವಿಷಯ ಮೊಳೆಯಷ್ಟೇ ಆದರೆ ವಿದ್ಯಾರ್ಥಿಗಳಿಗೆ ಕೊಡುವ ವಿಷಯವೆಷ್ಟು? ಆದ್ದರಿಂ ಶಿಕ್ಷಕನು ಸದಾ ವಿದ್ಯಾರ್ಥಿಯಾಗಿರಬೇಕು. ಉನ್ನತ ಮಟ್ಟದ ಗ್ರಂಥಗಳನ್ನು ಅಧ್ಯಯನ ಮಾಡಬೇಕು. ಅವನು ಹೊಸ ವಿಷಯಗಳ ಸಾಗರದಂತಿರಬೇಕು. ಅವನಲ್ಲಿ ಜ್ಞಾನಜ್ಯೋತಿ ಸದಾ ಬೆಳಗು ತ್ತಿರಬೇಕು. ಆಗ ಮಾತ್ರವೇ ಇತರರಿಗೂ ಆ ಜ್ಯೋತಿಯ ಬೆಳಕನ್ನು ಕೊಡಲು ಸಾಧ್ಯ. ಆದ್ದರಿಂದಲೇ ಶ್ರೇಷ್ಠ ಮಟ್ಟದ ಒಂದೊಂದು ಪುಸ್ತಕಭಾಂಡಾರ ಪ್ರತಿ ಶಾಲೆಯಲ್ಲಿಯ ಇರಬೇಕು. ಅಷ್ಟೇ ಅಲ್ಲದೆ ಮಕ್ಕಳಿಗೆ ವಿವಿಧ ವಿಷಯಗಳ ಅನುಕೂಲವಾದ ಇತರ ಸಹಾಯಕ ಸಂದರ್ಭ ಗ್ರಂಥ

ಗಳಿರಬೇಕು. ಮಕ್ಕಳು ತಮಗೆ ಮೀಸಲಾಗಿಟ್ಟಿರುವ ಪಠ್ಯ ಪುಸ್ತಕ ಗಳ ಜೊತೆಗೆ ಇತರ ವಿಷಯಗಳ ಪುಸ್ತಕಗಳನ್ನೂ ಓದಬೇಕು. ಇದರಿಂದ ಅವರ ಸಾಮಾನ್ಯಜ್ಞಾನ ಬೆಳೆಯುತ್ತದೆ.

ಹಾಗೆಯೇ ವಿಜ್ಞಾನದ ವಿಷಯವನ್ನು ಪ್ರಯೋಗದ ಮೂಲಕವೇ ಹೇಳಬೇಕು. ಹಿಂದೆ ಹೇಳಿದ ಹಾಗೆ ಮಕ್ಕಳು ನೋಡುವದರಿಂದ ವಿಷಯವನ್ನು ಸಂಪೂರ್ಣವಾಗಿ ಅರಿಯುವರು. ಒಂದು ಬಾರಿ ನೋಡಿದ ವಿಷಯವನ್ನು ಎಂದಿಗೂ ಮರೆಯು ವದಿಲ್ಲ. ಪ್ರಯೋಗಗಳನ್ನು ಮಾಡುವದರಿಂದ ವೀಕ್ಷಣಾಶಕ್ತಿ ಬೆಳೆಯುತ್ತದೆ. ವಿವೇಚನೆಗೆ ಪುಟ ಕೊಟ್ಟಂತಾಗುತ್ತದೆ. ತರ್ಕಬುದ್ಧಿ ಬೆಳೆದು ವಿಚಾರಶಕ್ತಿಗೆ ಹಾದಿ ಮಾಡಿಕೊಟ್ಟಂತಾಗುತ್ತದೆ. ಇದರಿಂದ ಮಕ್ಕಳ ಮಾನಸಿಕ ವೈಜ್ಞಾನಿಕ ಶಕ್ತಿಯು ವೃದ್ಧಿಯಾಗುವದು. ಪ್ರಯೋಗವಿಲ್ಲದೇ ವಿಜ್ಞಾನದ ಪಾಠ ಯಶಸ್ವಿಯಾಗುವದಿಲ್ಲ. ಇದರಿಂದ ಪ್ರತಿಯೊಂದು ಶಾಲೆಯಲ್ಲಿಯೂ ಒಂದೊಂದು ಪ್ರಯೋಗಶಾಲೆ ಇರಬೇಕು. ಅದನ್ನು ಶಿಕ್ಷಕರು ಮಕ್ಕಳಿಗೆ ತೋರಿ ಸುವದು ಮಾತ್ರವಲ್ಲದೆ ಮಕ್ಕಳಿಂದಲೇ ಅದನ್ನು ಪ್ರಾಯೋಗಿಕ ವಾಗಿ ಮಾಡಿಸಬೇಕು. ನೋಡಿ ಮಾಡಿದ ಮೇಲೆ ಅವರ ಮನದ ಭಿತ್ತಿಯ ಮೇಲೆ ಅಚ್ಚೊತ್ತಿದಂತಾಗುತ್ತದೆ. ಕಪ್ಪುಹಲಗೆಯ ಪ್ರಯೋಗವನ್ನು ವಿಜ್ಞಾನದಲ್ಲಿ ಎಂದೆಂದಿಗೂ ಮಾಡಬಾರದು.

ಈ ದೃಷ್ಟಿಯಿಂದ ಇಂದು ನಮ್ಮ ಶಾಲೆಗಳ ಪರಿಸ್ಥಿತಿ ಬಹಳ ಶೋಚನೀಯವಾಗಿದೆ. ಅಲ್ಲಿ ಪುಸ್ತಕ ಭಾಂಡಾರಗಳಿರು ವದಿಲ್ಲ. ಅವುಗಳಿದ್ದರೂ ಇಡಲು ಕಪಾಟುಗಳಿರುವದಿಲ್ಲ. ಇವೆರ

ಡುಗಳಿದ್ದರೂ ಮಕ್ಕಳು ಓದುವದಿಲ್ಲ. ಒಂದು ಪೆಟ್ಟಿಗೆಯಲ್ಲಿ ಇಟ್ಟಿರುವ ಪಠ್ಯ ಪುಸ್ತಕಗಳ ಕೈಪಿಡಿಯನ್ನು ಗೆದ್ದಲು ಉಪಯೋಗಿಸಿಕೊಳ್ಳುತ್ತವೆ. ಗೆದ್ದಲು ಹುಳುಗಳು ಆ ಪುಸ್ತಕವನ್ನು ಸಂಪೂರ್ಣ ತಿಂದು ಜೀರ್ಣಿಸಿಕೊಂಡಿವೆಯೋ ಹೊರತು ಅವುಗಳಲ್ಲಿ ಏನು ಅಚ್ಚಾಗಿರುತ್ತದೆ ಎಂಬುದನ್ನು ತಿಳಿಯಲು ನಮ್ಮ ಶಿಕ್ಷಕರಲ್ಲಿ ಬಹುತೇಕ ಜನರು ಪ್ರಯತ್ನ ಪಡುವದಿಲ್ಲ. ಇನ್ನುಳಿದ ಪುಸ್ತಕಗಳನ್ನು ಮಕ್ಕಳು ಎಷ್ಟು ಯಶಸ್ವಿಯಾಗಿ ಓದಬಹುದು?

ಮಕ್ಕಳಿಗೆ ಕೂಡಲು ಶಾಲಾ ಕಟ್ಟಡಗಳೇ ಇಲ್ಲ. ಇನ್ನು ಪ್ರಯೋಗ ಶಾಲೆಗಳೆಲ್ಲಿಂದ ಬರಬೇಕು? ಅಷ್ಟೇಕೆ ಶಾಲೆಯಲ್ಲಿ ಪ್ರಯೋಗಮಾಡಿ ತೋರಿಸಲು ಪ್ರಯೋಗಕ್ಕೆ ಸಂಬಂಧಪಟ್ಟ ವಸ್ತುಗಳೇ ಇರುವದಿಲ್ಲ.

ಉತ್ತಮ ಸ್ಥಿತಿಯ ಗ್ರಂಥಾಲಯ ಮತ್ತು ಪ್ರಯೋಗಾಲಯಗಳ ಕೊರತೆ ಪ್ರಾಥಮಿಕ ಶಿಕ್ಷಣದ ಬಹು ಪ್ರಮುಖ ಸಮಸ್ಯೆಯಾಗಿದೆ.

## ೧೦. ನುರಿತ ಶಿಕ್ಷಕರು

ಬಹಳ ಶಾಲೆಗಳಲ್ಲಿ ಮೇಲೆ ವರ್ಣಿಸಿದ ಎಲ್ಲ ಅನುಕೂಲತೆಗಳಿದ್ದರೂ ನುರಿತ, ಅರಿತ ಶಿಕ್ಷಕರಿಲ್ಲದಿದ್ದರೆ ಈ ಪ್ರಯೋಗಗಳು ಯಶಸ್ವಿಯಾಗಲಾರವು. ಶಿಕ್ಷಕರಿಗೆ ಈ ವಿಷಯದಲ್ಲಿ ಹೆಚ್ಚು ಶಿಕ್ಷಣ ಬೇಕು. ಆದ್ದರಿಂದಲೇ ಅವರಿಗೆ ಮಧ್ಯಾವಧಿ ಸೇವೆಯ ವ್ಯವಸ್ಥೆ

ಾಡಿರುತ್ತಾರೆ. ಸಮುದಾಯ ಚರ್ಚೆ, ಅಲ್ಪಾವಧಿ ತರಬೇತಿ
ಸೆಮಿನಾರ್ಸ್. ವೀಕ ಎಂಡ್ ಕೋರ್ಸಸ್) ಇತ್ಯಾದಿಗಳಿಗೆ ಶಿಕ್ಷಕರನ್ನು
ುಹಿಸಿ ತರಬೇತಿಯನ್ನು ಕೊಡುವ ಅನುಕೂಲತೆ ಮಾಡಲಾಗಿದೆ.
ಷ್ಟೆಲ್ಲಮಾಡಿದರೂವಿಷಯವನ್ನುಕೂಲಂಕಷವಾಗಿ ತಿಳಿಯಬೇಕೆಂಬ
ಜ್ಞಾನದ ದಾಹವಿಲ್ಲದಿದ್ದರೆ ಬಲವಂತ ಮಾಡಿ ಅವರಿಗೆ ವಿಷಯ
ುಂಬಲು ಸಾಧ್ಯವಿಲ್ಲ. ಈ ಜ್ಞಾನದಾಹ ಸ್ವಭಾವತಃ ಬರಬೇಕೇ
ನಃ ಯಾವ ವಿಶ್ವವಿದ್ಯಾನಿಲಯವೂ ಅವನ್ನು ಕೊಡಲು ಸಾಧ.
ಲ್ಲಿ. ಹುಟ್ಟು ಶಿಕ್ಷಕರಿದ್ದವರಲ್ಲಿ ಮಾತ್ರ ಈ ಗುಣಗಳು ಇರುತ್ತವೆ
ಂತಹ ಗುಣಗಳಿರುವ ಶಿಕ್ಷಕರನ್ನೇ ಆರಿಸಿ ಶಿಕ್ಷಕರನ್ನಾಗಿ ಮಾಡಲು
ಾಧ್ಯವಿಲ್ಲ. ಕಾರಣ ಈ ಗುಣಗಳನ್ನು ಅಳತೆ ಮಾಡುವ ಅಳತೆ
ೋಲು ಯಾವುದೂ ಇಲ್ಲ. ಸಾಧ್ಯವಿದ್ದ ಮಟ್ಟಿಗೆ ಉತ್ತಮ
ಟ್ಟದ ವಿದ್ಯಾಭ್ಯಾಸ ಇರುವವರನ್ನು ಆಯ್ಕೆಮಾಡುವದು
ಳ್ಳೆಯದು. ಒಬ್ಬ ಶಿಕ್ಷಕನು ಒಂದು ಬಾರಿ ಆಯ್ಕೆಯಾದ
ೕಲೆ ನಿವೃತ್ತಿ ಹೊಂದುವವರೆಗೆ ಸಾವಿರಾರು ವಿದ್ಯಾರ್ಥಿಗಳ
ಕ್ತಿತ್ವವನ್ನು ನಿರೂಪಿಸಬೇಕಾಗುತ್ತದೆ. ಅದ್ದರಿಂದ ಈ ವಿಷಯ
ಲ್ಲಿ ಉದಾಸೀನತೆ ಸಲ್ಲದು.

ಶಿಕ್ಷಕರಿಗೆ ತರಬೇತಿ ಕೊಡುವ ಕೇಂದ್ರಗಳು ಉತ್ತಮವಾಗಿರ
ೕಕು. ಆಧುನಿಕ ವಿಷಯಗಳನ್ನೊಳಗೊಂಡ ಪುಸ್ತಕಗಳ
ಂಡಾರ ವೈಜ್ಞಾನಿಕ ವಿಷಯಗಳ ಬೆಳವಣಿಗೆಗೆ ಪ್ರಯೋಗ
ಾಲೆಗಳಿರಬೇಕು. ಆಟದ ಮೈದಾನ ಇತ್ಯಾದಿಗಳಿರಬೇಕು.

ಇವೆಲ್ಲವುಗಳಿಗಿಂತ ಹೆಚ್ಚಾಗಿ ನುರಿತ (ಅನುಭವಿಕ) ತಜ್ಞ
ಪ್ರಾಚಾರ್ಯರು ಹಾಗೂ ಕುಲಪತಿಗಳಿಬೇಕು. ತರಬೇತಿ ಕೇಂದ್ರ

ಶಿಕ್ಷಣಪ್ರಸಾರದ ಕೇಂದ್ರಸ್ಥಾನ. ರಾಷ್ಟ್ರದ ಮೂಲೆ ಮೂಲೆಗೂ ಇಲ್ಲಿಂದ ಜ್ಞಾನ ಪ್ರಸಾರವಾಗಬೇಕು. ಇಲ್ಲಿ ಶಿಕ್ಷಕರು ಕಲಿತದ್ದನ್ನೇ ತಮ್ಮ ಶಾಲೆಗೆ ಹೊತ್ತೊಯ್ಯುವರು, ಇಲ್ಲಿಯ ನಡೆನುಡಿ ಇವೆಲ್ಲಾ ಮುಖ್ಯವಾದವುಗಳು. ಪ್ರಾಚಾರ್ಯರುಗಳಿಂದ ಶಿಕ್ಷಕರು (ಅಧ್ಯಾಪಕರು) ಪ್ರಭಾವಿತರಾಗಬೇಕು.

ಅರಿತ ನುರಿತ ಶಿಕ್ಷಕರ ಕೊರತೆಯು ಶಿಕ್ಷಣ ಕ್ಷೇತ್ರದಲ್ಲಿಯ ಪ್ರಗತಿಗೆ ಮಾರಕವಾಗಿದೆಯೆಂದು ಹೇಳಬಹುದು.ಅಂಥ ಶಿಕ್ಷಕರನ್ನು ದೊರಕಿಸುವದು ಮಹಾ ಸಮಸ್ಯೆಯಾಗಿದೆ.

## ೧೧. ಶಾಲೆಗಳಲ್ಲಿ ಉಪಹಾರ ಯೋಜನೆ

ಮಾನವನ ಶಾರೀರಿಕ ಹಾಗು ಮಾನಸಿಕ ಬೆಳವಣಿಗೆಯು ಆತನು ಸೇವಿಸುವ ಆಹಾರದ ಮೇಲೆ ಅವಲಂಬಿಸಿದೆ. ಸಮತೋಲ ಹಾಗು ಪೌಷ್ಟಿಕ ಆಹಾರದ ಮೇಲೆ ಇದು ಸಾಧ್ಯ. ಇವರ ಕೊರತೆಯಿಂದ ಮಕ್ಕಳು ಮುಖ್ಯವಾಗಿ ನಾನಾ ರೋಗಗಳಿಗೆ ಬಲಿಯಾಗುತ್ತಾರೆ. ಈ ರೀತಿಯ ಅಪೌಷ್ಟಿಕತೆಯುನ್ನು ನಿವಾರಿಸಲು ರಾಜ್ಯ ಸರಕಾರವು ದೊಡ್ಡ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಇದೇ ಮಧ್ಯಾಹ್ನದ ಉಪಹಾರ ಯೋಜನೆ.

ಶಾಲಾಮಕ್ಕಳನ್ನು ಸಾಲೆಗೆ ತಪ್ಪದೇ ಬರುವಂತೆ ಆಕರ್ಷಿಸಲು ಹಾಗು ಅವರಿಗೆ ಇರುವ ಪೌಷ್ಟಿಕಾಂಶದ ಕೊರತೆಯು ಕ್ಷಪ.

೩ ಅಂಶವನ್ನಾದರೂ ನಿವಾರಿಸಲು ಈ ಯೋಜನೆಯು ರೂಪ ಗೊಂಡಿದೆ. ಇದರಲ್ಲಿ ಮೂರು ರೀತಿಯ ಕಾರ್ಯಕ್ರಮಗಳಿವೆ. ವುಗಳ ಪ್ರಗತಿ ಈ ರೀತಿ ಇದೆ.

**. ಮಕ್ಕಳ ಪೌಷ್ಟಿಕ ಕಾರ್ಯಕ್ರಮ:**

( ಪ್ರಾಥಮಿಕ ಶಾಲಾಮಕ್ಕಳಿಗೆ )

ಇದು ಅಮೇರಿಕದ "ಕೇರ್" ಸಂಸ್ಥೆಯ ನೆರವಿನಿಂದ ನಡೆ ಯುತ್ತಿದೆ. ಇದರ ಲಾಭ ಪ್ರಾಥಮಿಕ ಶಾಲೆಯ ಹಾಗು ಪೂರ್ವ ಪ್ರಾಥಮಿಕ ಶಾಲೆಯ ಮಕ್ಕಳಿಗೆ ದೊರೆಯುತ್ತಿದೆ. ಇದನ್ನು ಡೆಸಲು ಪ್ರತಿ ಮಗುವಿಗೆ ( ವರ್ಷಕ್ಕೆ ೩ ಪೈಸೆಯಂತೆ ಸಾದಿ ಲ್ವಾರು ಹಣ ಹಾಗೂ ಅಡಿಗೆ ಮಾಡುವವರಿಗೆ ಪ್ರತ್ಯೇಕ ಸಹಾಯ ನವಿರುತ್ತದೆ. ಪ್ರತಿ ಮಗುವಿಗೆ ೦. ೮೦ ಗ್ರಾಂ ರವ ಹಾಗೂ ೦೦೭ ಗ್ರಾಂ ಎಣ್ಣೆಯಂತೆ ಸಾಮಾನುಗಳನ್ನು ಪೂರೈಸಲಾಗುತ್ತಿದೆ.

**ಧಾರವಾಡ ಜಿಲ್ಲೆಗೆ ಮಂಜೂರಾದ ಫಲಾನುಭವಿಗಳು**

( ಮಕ್ಕಳುಗಳ ಸಂಖ್ಯೆ )

| ಜಿಲ್ಲೆ | ೧೯೭೭-೭೮ | ೧೯೭೮-೭೯ |
|---|---|---|
| ರವಾಡ ಜಿಲ್ಲೆ | ೭೪,೧೦೦ ಮಕ್ಕಳು | ೮೬,೯೦೦ ಮಕ್ಕಳು |

**ಸಿದ್ಧಪಡಿಸಿದ ಆಹಾರ:**

ಇದು ಪೂರ್ಣವಾಗಿ ಕರ್ನಾಟಕ ರಾಜ್ಯ ಸರ್ಕಾರದವರೇ ಗೊಂಡಿರುವ ಕಾರ್ಯಕ್ರಮ. ಇದರ ಪ್ರಕಾರ ಪ್ರತಿ ಮಗುವಿಗೆ

ಪ್ರತಿದಿನ ೦.೦೪೦ ಗ್ರಾಂ ಸಿಹಿ ಹಾಗೂ ೦. ೦೪೦ ಗ್ರಾಂ ಖಾರ ಬಿಸ್ಕತಗಳನ್ನು ಕೊಡಲಾಗುವದು. ಕೇಂದ್ರ ಆಹಾರ ಸಂಶೋಧನಾಸಂಸ್ಥೆಯವರು ಗೊತ್ತುಪಡಿಸಿದ ರೀತಿಯಲ್ಲಿ ಆಹಾರ ವನ್ನು ಬೆಂಗಳೂರಿನಲ್ಲಿಯೇ ತಯಾರಿಸಿ ಕೆಲವು ಜಿಲ್ಲೆಗಳಿಗೆ ಮಾತ್ರ ರವಾನಿಸಲಾಗುತ್ತಿದೆ. ಇದಕ್ಕಾಗಿ ಪ್ರತ್ಯೇಕ ಸಾದಿಲ್ವಾರು ಹಣ ಇರುವದಿಲ್ಲ. ನಮ್ಮ ಜಿಲ್ಲೆಯಲ್ಲಿ ಲಾಭ ಪಡೆಯುತ್ತಿರುವ ಫಲಾನುಭವಿಗಳು ( ಮಕ್ಕಳ ಸಂಖ್ಯೆ ) ಹೀಗಿದೆ:

| ಜಿಲ್ಲೆ | ೧೯೭೭-೭೮ | ೧೯೭೮-೭೯ |
|---|---|---|
| ಧಾರವಾಡ ಜಿಲ್ಲೆ | ೪೦,೦೦೦ ಮಕ್ಕಳಿಗಾಗಿ | ೪೦೦೦೦ ಮಕ್ಕಳಿಗಾಗಿ |

## ೩ ವಿಶ್ವ ಆಹಾರ ಯೋಜನೆ:

ವಿಶ್ವ ಸಂಸ್ಥೆ ಕೇಂದ್ರ ಸರ್ಕಾರ ಹಾಗೂ ಕರ್ನಾಟಕ ರಾಜ್ಯ ಸರಕಾರದ ನಡುವೆ ಆದ ಒಪ್ಪಂದದ ಪ್ರಕಾರ ಈ ಯೋಜನೆ ೧೯೭೨ರಲ್ಲಿ ಪ್ರಾರಂಭವಾಯಿತು. ಇದರಲ್ಲಿ ಎರಡು ರೀತಿಯ ಕಾರ್ಯಕ್ರಮಗಳಿವೆ.

(೧) ಒಂದು ಊಟದ ಯೋಜನೆ (ಹೈಸ್ಕೂಲ್ ಹಾಗೂ ಕಾಲೇಜು ಮಕ್ಕಳ ಸಲುವಾಗಿ)

(೨) ಮೂರು ಊಟದ ಯೋಜನೆ (ಹಾಸ್ಟೇಲುಗಳು ಅನಾಥಾಲಯುಗಳು ಹಾಗೂ ರಿಮ್ಯಾಂಡ ಹೋಮ್ ಇತ್ಯಾದಿ)

### (೧) ಒಂದು ಊಟದ ಯೋಜನೆ :

ಆಯ್ದು ಕೆಲವು ಮಾಧ್ಯಮಿಕ ಶಾಲೆಗಳು ಹಾಗೂ ಕಾಲೇಜು ಗಳಲ್ಲಿ ೦.೦೨೦ ಗ್ರಾಂ ಎಣ್ಣೆ ೦.೦೨೦ ಗ್ರಾಂ ಹಾಲಿನ ಪುಡಿಯಂತೆ

ಒದಗಿಸಲಾಗುತ್ತಿದೆ. ಇದರ ಖರ್ಚಿಗಾಗಿ ಸರಕಾರವು ಸಾದಿಲ್ವಾರು
ಹಣವನ್ನು ಮಂಜೂರು ಮಾಡಿದ್ದು ಅದನ್ನು ೦.೦೩ ಪೈಸೆಯಂತೆ
ಗಿದೆ. ಈ ವರ್ಷ ೦.೧೦ ಪೈಸೆಗೆ ಹೆಚ್ಚಿಸಿದೆ.

| ವಿವರ | ೧೯೭೭-೭೮ | | ೧೯೭೮-೭೯ | |
|---|---|---|---|---|
| | ಕೇಂದ್ರ | ಫಲಾನುಭವಿಗಳು | ಕೇಂದ್ರ | ಫಲಾನುಭವಿಗಳು |
| ೧) ಹೈಸ್ಕೂಲುಗಳು | ೮೩ | ೮೮೭೫ | ೮೪ | ೯೨೯೦ |
| ೨) ಕಾಲೇಜುಗಳು | ೧೧ | ೨೪೮೫ | ೧೧ | ೨೧೧೦ |
| ಒಟ್ಟು | ೯೩ | ೧೧೩೬೦ | ೯೫ | ೧೧೪೦೦ |

## (೩) ಮೂರು ಊಟದ ಯೋಜನೆ:

ಸರ್ಕಾರಿ ಹಾಸ್ಟೇಲುಗಳು. ಸರ್ಕಾರಿ ರಿಮಾಂಡ ಹೋಮ್
ಗಳು. ಖಾಸಗಿ ವಿದ್ಯಾರ್ಥಿನಿಲಯಗಳು, ಅನಾಥಾಲಯಗಳು
ಹಾಗೂ ರಿಮಾಂಡಹೋಮ್‌ಗಳಿಗೆ ಮಂಜೂರಾದ ಕಾರ್ಯಕ್ರಮ
ಇದು.

ಇವರ ಲಾಭ ಪಡೆಯುತ್ತಿರುವ ಧಾರವಾಡ ಜಿಲ್ಲೆಯ ಸಂಸ್ಥೆಗಳು:

| ವಿವರ | ೧೯೭೬–೭೭ | | ೧೯೭೭-೭೮ | | ೧೯೭೮–೭೯ | |
|---|---|---|---|---|---|---|
| | ಕೇಂದ್ರ | ಫಲಾನುಭವಿಗಳು | ಕೇಂದ್ರ | ಫಲಾನುಭವಿಗಳು | ಕೇಂದ್ರ | ಫಲಾನುಭವಿಗಳು |
| ೧ ಸರ್ಕಾರಿ ಹಾಸ್ಟೇಲುಗಳು | ೨೮ | ೧೧೬೫ | ೪೪ | ೨೧೯೫ | ೪೫ | ೨೩೬೦ |
| ೨ ಸರ್ಕಾರಿ ರಿಮಾಂಡಹೋಮ್ | ೨ | ೨೩೨ | ೩ | ೫೩೦ | ೩ | ೫೩೦ |
| ೩ ಖಾಸಗಿ ವಿದ್ಯಾರ್ಥಿ ವಸತಿ ಗೃಹಗಳು | ೫೨ | ೨೩೭೪ | ೬೪ | ೩೮೧೪ | ೬೮ | ೪೯೬೩ |
| ೪ ಖಾಸಗಿ ರಿಮಾಂಡ ಹೋಮ್ | ೫ | ೩೫೦ | ೫ | ೩೪೧ | ೪ | ೨೭೫ |
| ಒಟ್ಟು | ೮೭ | ೪೧೨೧ | ೧೧೬ | ೬೮೮೦ | ೧೨೧ | ೮೧೨೮ |
| ಎರಡು ಯೋಜನೆಗಳ ಒಟ್ಟು ಮೊತ್ತ (ಜಿಲ್ಲೆಗೆ) | ೧೫೮ | ೧೨೭೨೧ | ೨೯೯ | ೧೮೨೪೦ | | |

ಉಪಾಹಾರ ಯೋಜನೆಗಳ ಆಹಾರ ಸಾಮಗ್ರಿಗಳು ಮದ್ರಾಸ ಬೆಂಗಳೂರು ಕೇಂದ್ರ ಗುದಾಮುಗಳ ಮೂಲಕ ಯಾಯು ತಾಲ್ಲೂಕಿನ ಸಹಾಯಕ ಶಿಕ್ಷಣಾಧಿಕಾರಿಗಳ ಮೂಲಕ ಮಂಜೂರಿ ಪಡೆದ ಕೇಂದ್ರಗಳಿಗೆ ಒದಗಿಸಲ್ಪಡುವುವು. ಮೇಲಿಂದ ಮೇಲೆ ಇಲಾಖಾಧಿಕಾರಿಗಳು ಹಾಗೂ 'ಕೇರ' ಕ್ಷೇತ್ರಾಧಿಕಾರಿಗಳು ಕೇಂದ್ರಗಳಿಗೆ ಭೆಟ್ಟಿಕೊಟ್ಟು ಯೋಗ್ಯ ಮಾರ್ಗದರ್ಶನ ನೀಡುವರು.

ಉಪಹಾರ ಸಾಮಗ್ರಿಗಳ ಬಹುಭಾಗ ದಾನವಾಗಿ ಹೊರ ದೇಶಗಳಿಂದ ಬಂದರೂ ಸರಕಾರವೂ ಈ ಯೋಜನೆಯಲ್ಲಿ ಯಶಸ್ವಿ ಯಾಗಿ ಲಕ್ಷಾಂತರ ರೂಪಾಯಿಗಳನ್ನು ಖರ್ಚುಮಾಡುತ್ತಿದೆ.

ಮೂರು ಊಟದ ಯೋಜನೆ ಕೇಂದ್ರಗಳಲ್ಲಿ ಬಾಲಕ ಬಾಲಕಿಯರ ಹಾಸ್ಟೇಲುಗಳು, ಅನಾಥಾಲಯಗಳು ರಿಮಾಂಡ ಹೋಮ್ ಇವುಗಳಲ್ಲಿ ಪ್ರತಿ ಮಗುವಿಗೆ ಪ್ರತಿ ದಿನಕ್ಕೆ ೪೦೦ಗ್ರಾಂ ಗೋದಿ ೪೦ಗ್ರಾಮ ಎಣ್ಣೆ ಮತ್ತು ೪೦ ಗ್ರಾಂ ಹಾಲಿನ ಪುಡಿ ಯನ್ನು ಉಪಯೋಗಿಸುವರು. ಈ ಸಂಸ್ಥೆಗಳು ತಮ್ಮ ದೀರ್ಘ ರಜಾದಿನಗಳಲ್ಲಿ ಇದನ್ನು ಕೊಡಬಹುದು. ಇದರ ಜೊತೆಗೆ ಯಾ ಇಲಾಖೆಗಳಿಂದ ಧನಸಹಾಯ ದೊರೆಯುವದು,

ಈ ವಿಶ್ವ ಆಹಾರ ಯೋಜನೆ ಕಾರ್ಯಕ್ರಮದನ್ವಯ ದೊರೆಯು ರುವ ಆಹಾರವು ಪೂರಕ ಆಹಾರ ಮಾತ್ರ. ಇದನ್ನು ಆರ್ಥಿಕ ಹಾಗೂ ಸಾಮಾಜಿಕವಾಗಿ ಹಿಂದುಳಿದವರಿಗಾಗಿಯೇ ಇರುತ್ತದೆ. ಇದು ಪೂರ್ಣವಾಗಿ ಸದುಪಯೋಗವಾಗುವಂತೆ ನೋಡಿಕೊಳ್ಳ ಬೇಕಾಗುತ್ತದೆ.

ಈ ಕೆಳಗೆ ಧಾರವಾಡ ಜಿಲ್ಲೆಯಲ್ಲಿ ಜಾರಿಯಲ್ಲಿರುವ ಆಹಾ
ಕಾರ್ಯಕ್ರಮಗಳ ಲಾಭ ಪಡೆದ ಮಕ್ಕಳ ಸಂಖ್ಯೆ. ದಿನವಹಿ ಉಪ
ಯೋಗಿಸಲ್ಪಡುವ ಆಹಾರ ಹಾಗೂ ಇವುಗಳ ಅಜಮಾಸು ಬೆ
ಯನ್ನು ಕೊಡಲಾಗಿದೆ

**ದಿನವಹಿ ಉಪಯೋಗಿಸಲ್ಪಡುವ ಆಹಾರ ಹಾಗೂ ಇವುಗಳ ಅಜಮಾಸು ಬೆಲೆ :**

| ಕಾರ್ಯಕ್ರಮ | ಲಾಭ ಪಡೆದ ಮಕ್ಕಳ ಸಂಖ್ಯೆ | ದಿನವಹಿ ಉಪಯೋಗಿಸಲ್ಪಡುವ ಆಹಾರ ಪ್ರಮಾಣ | ದರ | ಅಜಮಾಸು ಬೆಲೆ |
|---|---|---|---|---|
| ೧ ಸಿದ್ಧಪಡಿಸಿದ ಆಹಾರ | ೪೦, ೦೦೦ | ೩,೨೦೦ ಕೆ ಜಿ | | ೧೦,೯೦೦ ರೂ |
| ೨ ಮಕ್ಕಳ ಪೌಷ್ಟಿಕ ಕಾರ್ಯಕ್ರಮ | ೮೬,೯೦೦ | | | |
| ರವಾ | | ೬೯೫೦ ಕೆ ಜಿ | | ೨೦,೮೫೦ ರೂ |
| ಎಣ್ಣೆ | | ೬೦೦ ಕೆ ಜಿ | | ೪,೨೦೦ ರೂ |
| ೩ ವಿಶ್ವ ಆಹಾರ ಯೋಜನೆ | ೧೯,೫೨೮ | | | ೨೫೦೫೦ |
| ಗೋದಿ | | ೫೬೦೦ | ೨.೬೬ | ೧೪೮೯೬.೦೦ |
| ಎಣ್ಣೆ | | ೫೬೦ | ೧೦.೪೫ | ೫೮೫೨.೦೦ |
| ಹಾಲು ಪುಡಿ | | ೫೬೦ | | ೧೫೬೯೨.೦೦ |
| | | | | ೩೬೫೪೦.೦೦ |
| ಧಾರವಾಡ ಜಿಲ್ಲೆಗೆ ಒಟ್ಟು | ೧೪೬೪೨೮ | | | ೬೧೯೯೦.೦೦ |

## ೫. ಶಾಲಾ ಅಭಿವೃದ್ಧಿ ಸಮಿತಿಗಳು ಹಾಗೂ ಅವುಗಳ ಸಾಧನೆಗಳು

ಇವುಗಳ ಪಾತ್ರ ಬಹಳ ಮಹತ್ತರವಾದದ್ದು. ಶಾಲೆಯ
ವಶ್ಯಕತೆಗಳನ್ನು ಸಮೀಪದಿಂದಲೇ ವೀಕ್ಷಿಸಿ ಶಾಲೆಗೆ ನೆರವು
ಡಲು ಇವುಗಳಿಗೆ ಸಾಧ್ಯವಾಗುತ್ತದೆ. ಪ್ರತಿ ಶಾಲೆಯ ಅವಶ್ಯ
ಗಳನ್ನು ಸರಕಾರ ನೋಡಿಕೊಳ್ಳುವುದು ಅಸಾಧ್ಯದ ಕೆಲಸ.
ಲಾ ಅಭಿವೃದ್ಧಿ ಸಮಿತಿಗಳ ಸಹಾಯವಿಲ್ಲದೆ ಯಾವ ಶಾಲೆಯೂ
ಭಿವೃದ್ಧಿಗೆ ಬರಲು ಸಾಧ್ಯವಿಲ್ಲ. ಮಕ್ಕಳಿಗೆ ಕೂಡ್ರಲು ಮಣೆಗಳು.
ಸ್ತಕಗಳನ್ನಿಡಲು ಕಪಾಟುಗಳು. ಕುರ್ಚಿಗಳು ಮೇಜುಗಳು.
ರು ಕುಡಿಯಲು ನೀರಿನ ಹೂಜಿ ಇತ್ಯಾದಿ ಅವಶ್ಯಕತೆಗಳಿವೆ.
ಷ್ಟೆ ಅಲ್ಲದೆ ಪುಸ್ತಕ ಭಂಡಾರ, ವಿಜ್ಞಾನ ಪಾಠಕ್ಕೆ ಸಂಬಂಧಪಟ್ಟ
ಯೋಗ ಶಾಲೆ, ಶಾಲಾ ಕಟ್ಟಡಗಳ ರಿಪೇರಿ ಹಾಗೂ ವಿಸ್ತಾರ
ತ್ಯಾದಿ ಕೆಲಸಗಳೆಲ್ಲಾ ಶಾಲಾ ಅಭಿವೃದ್ಧಿ ಸಮಿತಿಗಳಿಂದ ಆಗ
ಕಾಗುತ್ತವೆ.

ಎಲ್ಲಿ ಶಾಲಾ ಅಭಿವೃದ್ಧಿ ಸಮಿತಿಗಳು ಚೇತನಪೂರ್ವಕ
ಗಿರುತ್ತವೆಯೋ ಅಲ್ಲಿ ಶಾಲೆಗಳೂ ಅಭಿವೃದ್ಧಿಗೆ ಬರುತ್ತವೆ.
ಾವ ಮಕ್ಕಳಿಗಾಗಿ ಅವರ ತಂದೆ ತಾಯಿಗಳು ನಿರಂತರವಾಗಿ
ುಮಿಸಿ ಆಸ್ತಿಯನ್ನು ಸಂಪಾದಿಸಿ ಮನೆಗಳನ್ನು ಕಟ್ಟಿಸಿ ತಮ್ಮ
ಕ್ಕಳು ಮೊಮ್ಮಕ್ಕಳು ಆದಿಯಾಗಿ ಎಲ್ಲರೂ ತಾವು ಸಂಪಾದಿಸಿದ

ಆಸ್ತಿಯನ್ನು ಅನುಭವಿಸಿಕೊಂಡು ಹೋಗಬೇಕೆಂಬ ಬೃಹದ
ಯನ್ನು ಇಟ್ಟುಕೊಂಡಿರುತ್ತಾರೋ ಅಂತಹ ಮಕ್ಕಳಿಗೆ ವಿದ್ಯೆ ಇ
ಹೋದಲ್ಲಿ ಆ ಮಕ್ಕಳು ದಡ್ಡರಾಗಿ ಉಳಿಯುತ್ತಾರೆ. ಆಗ ಅ
ಕುಟುಂಬಕ್ಕೆ ಮಾತ್ರವಲ್ಲದೆ ಭಾವಿ ರಾಷ್ಟ್ರಕ್ಕೆ ಅಪಾರವಾದ
ವಾಗುತ್ತದೆ. ಆದ್ದರಿಂದ ತಂದೆ ತಾಯಿಗಳಿಗೆ ಈ ವಿಷಯವ
ತಿಳಿಸಿ ಅವರ ಸಹಕಾರವನ್ನು ಪಡೆಯಬೇಕು. ಶಾಲೆ ಅಭಿವೃ
ಸ್ಥಿತಿಯಲ್ಲಿದ್ದರೆ ಮಕ್ಕಳೂ ವಿದ್ಯಾವಂತರಾಗುತ್ತಾರೆ. ಶಾಲೆಗ
ಶಿಥಿಲವಾಗಿದ್ದರೆ ಕೂಡ್ರಲು ಸ್ಥಳವಿಲ್ಲದೆ ಪಾಠೋಪಕರಣಗ
ಹಾಗೂ ಕ್ರೀಡೋಪಕರಣಗಳಿಲ್ಲದಿದ್ದರೆ ಶಾಲೆಗಳನ್ನು ಆಕರ್ಷ
ಯವಾಗಿ ಇಡಲು ಸಾಧ್ಯವಾಗುವದಿಲ್ಲ. ಆಗ ಕೋಳಿ ಮ
ಅಪವ್ಯಯ (wastage and stagnation) ಪ್ರಾರಂಭವಾ
ತ್ತದೆ. ಮಧ್ಯಂತರದಲ್ಲಿ ಮಕ್ಕಳು ಶಾಲೆಗಳನ್ನು ಬಿಟ್ಟು ಮ
ಯಲ್ಲಿಯೇ ನಿಲ್ಲುತ್ತಾರೆ. ಇದರಿಂದ ಕಡ್ಡಾಯ ಶಿಕ್ಷಣದ ಉದ್ದೇ
ಸಫಲವಾಗುವದಿಲ್ಲ. ಶಾಲಾ ಅಭಿವೃದ್ಧಿ ಸಮಿತಿಗಳು ಸಕ್ರಿಯವಾ
ಕೆಲಸ ಮಾಡುತ್ತಿದ್ದರೆ ಶಾಲೆಗೆ ಆವಶ್ಯಕವಾದ ವಸ್ತುಗಳನ್ನು ಒ
ಸುವದು ಮಾತ್ರವಲ್ಲದೆ ಶಾಲೆಯ ಸಂಪರ್ಕವನ್ನು ವಿಶೇಷವಾ
ಬೆಳೆಸಿಕೊಂಡು ಮಕ್ಕಳ ಅಭಿವೃದ್ಧಿಗೆ ಕಾರಣರಾಗುತ್ತಾರೆ. ಉ
ಧ್ಯಾಯ ಹಾಗೂ ತಂದೆತಾಯಿಗಳ ಸಂಪರ್ಕ ಬೆಳೆಯುತ್ತ
ಇದರಿಂದ ಮಕ್ಕಳ ಅಭ್ಯುದಯ ಉತ್ತಮ ಮಟ್ಟದಲ್ಲಿ ಸಾಧಿ
ತ್ತದೆ.

ಈ ವರೆಗೆ ಚರ್ಚಿಸಿದ ಸಮಸ್ಯೆಗಳಿಗೆ ತಕ್ಕಮಟ್ಟಿನ
ಹಾರವನ್ನು ಕಂಡುಕೊಳ್ಳಲು ಧಾರವಾಡ ಜಿಲ್ಲೆಯ ಪ್ರಾಥ

ಕ್ಷೇತ್ರದಲ್ಲಿ ಕೆಲವು ಯೋಜನೆಗಳನ್ನು ಕೈಕೊಳ್ಳಲಾಗಿದೆ.
ಇಂತಿವೆ:

## ಶಾಲಾ ಅಭಿವೃದ್ಧಿ ಸಮಿತಿಗಳ ಸಮ್ಮೇಳನ

ಶಾಲೆಗಳಿಗೆ ಭೆಟ್ಟಿ ಈತ್ತಾಗ ಮಕ್ಕಳು ನೆಲದ ಮೇಲೆ
ಕುತ್ತಿದ್ದವು. ಬಟ್ಟೆಗಳೆಲ್ಲ ಮಲಿನವಾಗುತ್ತಿದ್ದವು. ಮಕ್ಕಳಿಗೆ
ತ್ರಲು ಮಣೆಗಳಿರಲಿಲ್ಲ. ಅನೇಕ ಶಾಲೆಗಳಲ್ಲಿ ಕಪಾಟು
ಲಿಲ್ಲ. ಪುಸ್ತಕಗಳಿಗೆ ಗೆದ್ದಲು ಹಿಡಿಯುತ್ತಿತ್ತು. ಅನೇಕ
ಗಳ ಉಪಾಧ್ಯಾಯರುಗಳಿಗೆ ಕೂಡ್ರಲು ಕುರ್ಚಿಗಳು ಹಾಗೂ
ಜುಗಳಿರಲಿಲ್ಲ. ೧೯೭೬-೭೭ರಲ್ಲಿ ಶಾಲಾ ಅಭಿವೃದ್ಧಿ ಸಮ್ಮೇಳ
ನ್ನು ಮಾಡಲು ತೀರ್ಮಾನಿಸಿದೆವು. ಆ ವರ್ಷ ಮಳೆಯಿಲ್ಲದೆ
ಗಳಿಗೆ ಕೆಲವು ಕಡೆ ಬೀಗಗಳನ್ನು ಹಾಕಿಕೊಂಡು ತಮ್ಮ
ನೆಗಳ ಜೊತೆಯಲ್ಲಿ ಬೇರೆ ಬೇರೆ ಊರುಗಳಿಗೆ ಹೋಗಿದ್ದರು.
ೂಕಿನ ಅಧಿಕಾರಿಗಳು ಸಮ್ಮೇಳನ ಯಶಸ್ವಿಯಾಗುವುದಿಲ್ಲ
ು ಹೇಳಿದರು. ಮಳೆಯಿಲ್ಲದ ಕಾರಣ ಯಾರೂ ಶಾಲೆಗಳಿಗೆ
ಕೊಡುವುದಿಲ್ಲವೆಂದು ಹೇಳಿದರು. ಆದರೂ ಹತ್ತೊಂಬತ್ತು
ಜುಗಳಲ್ಲಿ ಶಾಲಾ ಅಭಿವೃದ್ಧಿ ಸಮ್ಮೇಳನಗಳನ್ನು ನಡೆಸಿದೆವು.
ಯಿಲ್ಲದೆ ಭೀಕರ ಕ್ಷಾಮವಿದ್ದರೂ ತಂದೆ ತಾಯಿಗಳು ಅತಿ
ಸ್ಸಿನಿಂದ ಮುಂದೆ ಬಂದು ತಮ್ಮ ಮಕ್ಕಳು ಕೂಡ್ರಲು
ಣೆಗಳು, ಕಪಾಟುಗಳು, ಮೇಜುಗಳು, ಕುರ್ಚಿಗಳು ಬೆಂಚು
, ನೀರಿನ ಹೂಜೆ—ಇತ್ಯಾದಿ ಸಾಮಾನುಗಳನ್ನು ಶಾಲೆಗೆ ದಾನದ
ದಲ್ಲಿ ಕೊಟ್ಟಿದ್ದು ಮಾತ್ರವಲ್ಲದೆ ಲಕ್ಷಾಂತರ ರೂಪಾಯಿ

ಬೆಲೆಬಾಳುವ ಶಾಲಾ ಕಟ್ಟಡಗಳನ್ನು ತಾವೇ ಸ್ವತಃ ಕಟ್ಟಿಸಿ ಕೊಟ್ಟರು.

ಆ ವರ್ಷದ ಅಂದರೆ ೧೯೭೬–೭೭ನೇ ಸಾಲಿನಲ್ಲಿ ಶಾಲಾ ಅಭಿವೃದ್ಧಿ ಸಮಿತಿಗಳ ಒಟ್ಟು ಕೊಡುಗೆ ಈ ಒಂದು ಜಿಲ್ಲೆಯಲ್ಲಿ ೨೪ ಲಕ್ಷ ರೂಪಾಯಿಗಳು. ಅದೇ ಪ್ರಕಾರ ೧೯೭೭–೭೮ನೇ ಸಾಲಿನಲ್ಲಿ ಶಾಲಾ ಅಭಿವೃದ್ಧಿ ಸಮಿತಿಗಳ ಸಮ್ಮೇಳನವನ್ನು ನಡೆಸಿ ೨೩ ಲಕ್ಷ ರೂಪಾಯಿ ಬೆಲೆ ಬಾಳುವ ಸಾಮಾನುಗಳನ್ನು ಶೇಖರಿಸ ಲಾಯಿತು ಹಾಗೂ ಕಟ್ಟಡಗಳನ್ನು ಕಟ್ಟಿಸಿತು. ಅಂದರೆ ೧೯೭೬-೭೭ ಹಾಗೂ ೧೯೭೭-೭೮ರಲ್ಲಿ ಒಟ್ಟು ೪೭ಲಕ್ಷ ರೂಪಾಯಿ ಬೆಲೆಬಾಳುವ ವಸ್ತುಗಳನ್ನು ಹಾಗೂ ಕಟ್ಟಡಗಳನ್ನು ಒದಗಿಸ ಲಾಗಿದೆ.

## (೨) ತೆಂಗಿನ ಗಿಡಗಳನ್ನು ನೆಡುವ ಯೋಜನೆ

ಶಾಲೆಗಳ ಅವಶ್ಯಕತೆಗಳು ಅನೇಕ. ಪ್ರತಿವರ್ಷ ದೇಣಿಗೆ ಕೊಟ್ಟರೂ ಸಾಲದು. ಹೀಗಿರುವಲ್ಲಿ ಒಂದು ವರ್ಷ ದೇಣಿಗೆ ಕೊಟ್ಟವರು ಮತ್ತೊಂದು ವರ್ಷ ದೇಣಿಗೆ ಕೊಡಲು ಹಿಂದೆಗೆಯು ತ್ತಾರೆ. ಶಾಲೆಯ ಅನೇಕ ಅವಶ್ಯಕತೆಗಳು ಹಾಗೆಯೇ ಉಳಿಯು ತ್ತವೆ. ಈ ಕಾರಣದಿಂದ ಶಾಶ್ವತವಾಗಿ ಶಾಲೆಗೆ ಕೊಡುಗೆಯನ್ನು ಕೊಡುವ ದಾನಿಗಳನ್ನು ಶಾಲೆಯಲ್ಲಿಯೇ ಇಡುವ ಉದ್ದೇಶ ದಿಂದ ಈ ತೆಂಗಿನ ಗಿಡದ ಯೋಜನೆಯನ್ನು ಕೈಗೊಂಡಿದೆ. ಒಂದು ತೆಂಗಿನ ಗಿಡ ಫಲವತ್ತಾದ ಸ್ಥಳದಲ್ಲಿ ಬೆಳೆದರೆ ಸುಮಾರು ೩೦೦ರಿಂದ ೪೫೦ ರೂಪಾಯಿಗಳ ವರೆಗೂ ಉತ್ಪತ್ತಿ ಒಂದು ವರ್ಷಕ್ಕೆ ದೊರೆಯುತ್ತದೆ.

ತೆಂಗಿನಗಿಡದ ಆಯುಸ್ಸು ೮೦ ವರ್ಷಗಳಿಂದ ೧೦೦ ವರ್ಷಗಳು. ಅಂದರೆ ಮೊದಲನೆ ೯ ವರ್ಷಗಳು ಫಲ ಸಿಕ್ಕದೆ ಇದ್ದರೂ ಸುಮಾರು ತೊಂಬತ್ತು ವರ್ಷಗಳ ಕಾಲ ವರ್ಷಕ್ಕೆ ಪ್ರತಿ ಗಿಡದಿಂದ ಕನಿಷ್ಠ ೧೦೦ ರೂಪಾಯಿಯಂತೆ ಉತ್ಪತ್ತಿ ದೊರಕುತ್ತದೆ. ಇದರಿಂದ ಶಾಲೆಗಳಿಗೆ ಅವಶ್ಯಕವಾಗಿ ಬೇಕಾಗಿರುವ ವಸ್ತುಗಳು, ಪಾಠೋಪಕರಣ. ಪೀಠೋಪಕಣ, ಕುರ್ಚಿ ಮೇಜು ಹೂಜಿ ಕಪಾಟು, ಪುಸ್ತಕಭಂಡಾರ ವಿಜ್ಞಾನದ ಪ್ರಯೋಗ ಶಾಲೆಗೆ ಬೇಕಾಗಿದ್ದ ವಸ್ತುಗಳು. ರೇಡಿಯೋ, ಪ್ರೊಜೆಕ್ಟರ ಇತ್ಯಾದಿ ವಸ್ತುಗಳನ್ನು ಕೊಂಡುಕೊಳ್ಳಬಹುದು. ಅಲ್ಲದೆ ಶಾಲೆಯ ರಿಪೇರಿ ಹಾಗೂ ಹೊಸ ಕಟ್ಟಡಗಳನ್ನು ಕಟ್ಟಬಹುದು.

೧೯೭೬–೭೭ ನೇ ಇಸ್ವಿಯಲ್ಲಿ ನೆಟ್ಟ ಗಿಡಗಳ ಪೈಕಿ ಜೀವಂತವಾಗಿರುವ ತೆಂಗಿನ ಗಿಡಗಳ ಸಂಖ್ಯೆ ೮೦೦೦ (ಎಂಟುಸಾವಿರ).

೧೯೭೭–೭೮ ನೇ ಇಸ್ವಿಯಲ್ಲಿ ೭೦೦೦ ಗಿಡಗಳನ್ನು ನೆಡಲಾಗಿದೆ. ಒಟ್ಟು ೧೫ ಸಾವಿರ ಗಿಡಗಳಾಗುತ್ತವೆ, ಇವುಗಳಿಂದ ಈ ಜಿಲ್ಲೆಯ ಶಾಲೆಗಳಿಗೆ ಇನ್ನು ಹತ್ತು ವರ್ಷಗಳ ನಂತರ ಪ್ರತಿವರ್ಷ ಸುಮಾರು ೧೫ ಲಕ್ಷ ರೂಪಾಯಿಯಂತೆ ತೊಂಬತ್ತು ವರ್ಷಗಳ ಕಾಲ ದೊರಕುತ್ತದೆ. ಇದರಿಂದ ಮೇಲ್ಕಾಣಿಸಿದ ಹಾಗೆ ಅವಶ್ಯಕ ವಸ್ತುಗಳನ್ನು ಕೊಂಡುಕೊಳ್ಳುವದು ಮಾತ್ರವಲ್ಲದೆ ಶಾಲಾ ಮಕ್ಕಳಿಗೆ ಉಪಹಾರ ಯೋಜನೆಯನ್ನು ಸಹ ವ್ಯವಸ್ಥೆಮಾಡಬಹುದು. ಈ ಯೋಜನೆ ಸರಕಾರದ ಕಾರ್ಯಕ್ರಮಕ್ಕೆ ಅನುಸಾರವಾಗಿ ಅಪಾರವಾದ ಕೊಡುಗೆಯನ್ನು ತೆಂಗಿನಕಾಯಿಗಳ

ಮೂಲಕ ಕೊಡುತ್ತದೆ. ಒಂದು ವೇಳೆ ಅಷ್ಟು ಉತ್ತಮವಾಗಿ ಬೆಳೆಬಾರದಿದ್ದರೂ ಕಡೆಯ ಪಕ್ಷ ಒಂದು ತೆಂಗಿನ ಗಿಡ ದಿಂದ ೧೦೦ ರೂಗಳ ಬೆಲೆ ಬಾಳುವ ತೆಂಗಿನಕಾಯಿಗಳು ದೊರಕುತ್ತವೆ. ಶಾಲೆಗೆ ಬೇಕಾದ ಪಾಠೋಪಕರಣಗಳು ಹಾಗೂ ಪೀಠೋಪಕರಣಗಳನ್ನು ಒದಗಿಸಿಕೊಳ್ಳಬಹುದು. ಗಿಡ ಮರಗಳು ಮಕ್ಕಳಿಗೆ ನೆರಳು ಕೊಡುವದಷ್ಟೇ ಅಲ್ಲದೆ ಶಾಲೆಯ ಸೌಂದರ್ಯವನ್ನು ಹೆಚ್ಚಿಸುತ್ತವೆ. ಗಿಡಮರಗಳ ಗುಂಪಿನ ನೆರಳಿನಲ್ಲಿ ವರ್ಗಗಳನ್ನು ನಡೆಸುವದು ಶಾಂತಿನಿಕೇತನವನ್ನು ಸ್ಮರಣೆಗೆ ತಂದುಕೊಡುವದು ಮಾತ್ರವಲ್ಲದೆ ಶಾಲೆಯ ಉತ್ಪತ್ತಿಯನ್ನು ಹೆಚ್ಚಿಸುತ್ತದೆ. ಈ ಕಾರ್ಯಕ್ರಮವನ್ನು ಉಪನಿರ್ದೇಶಕರ ಕಚೇರಿಗೂ ವಿಸ್ತರಿಸುವ ಸಲುವಾಗಿ ೭೦ ತೆಂಗಿನ ಸಸಿಗಳನ್ನು ನೆಡಲಾಯಿತು.

## (೩) ಮಕ್ಕಳಿಂದ ದಿನಕ್ಕೊಂದು ಒಳ್ಳೆಯ ಕೆಲಸ

ನವಭಾರತದ ನಿರ್ಮಾಣದಲ್ಲಿ ಶಿಕ್ಷಣದ ಪಾತ್ರ ಅತಿ ಮುಖ್ಯವಾಗಿದೆ. ನಾಳಿನ ಪ್ರಜೆಗಳಾಗಲಿರುವ ಇಂದಿನ ಬಹುತೇಕ ಮಕ್ಕಳು ಅನೇಕ ಸಮಾಜಘಾತಕ ಶಕ್ತಿಗಳ ಪ್ರಭಾವಕ್ಕೆ ಒಳಗಾಗಿ ತಮ್ಮ ಅಮೂಲ್ಯ ವೇಳೆಯನ್ನು ಮತ್ತು ಸಾಮರ್ಥ್ಯವನ್ನು ವಿಘಾತಕ ಚಟುವಟಿಕೆಗಳಲ್ಲಿ ತೊಡಗಿಸುತ್ತಾರೆ. ಈ ಉದಯೋನ್ಮುಖ ಪೀಳಿಗೆಯನ್ನು ಸಮಾಜದ ರಚನಾತ್ಮಕ ಕಾರ್ಯಗಳತ್ತ ತಿರುಗಿಸಲು ನೈತಿಕ ಶಿಕ್ಷಣ ಅನಿವಾರ್ಯವಾಗಿದೆ.

ಪಠ್ಯ ವಿಷಯಗಳಲ್ಲಿ ಪ್ರಗತಿ ಸಾಧಿಸುವದಷ್ಟೇ ಶಾಲೆಯ ಮುಖ್ಯ ಕೆಲಸವಲ್ಲ. ನೂತನ ಜನಾಂಗದ ಸೃಜನಾತ್ಮಕ ಕಾರ್ಯ

ನಮ್ಮ ಶಾಲೆಗಳಲ್ಲಿ ನಡೆದು ನಮ್ಮ ಮಕ್ಕಳು ಒಳ್ಳೆಯ ನಡೆನುಡಿ
ಗಳನ್ನು ತಮ್ಮ ಬಾಳ್ವೆಯಲ್ಲಿ ಅಳವಡಿಸಿಕೊಳ್ಳಬೇಕು. ರಾಷ್ಟ್ರದ
ಉತ್ತಮ ಪ್ರಜೆಗಳಾಗಿ ಬಾಳಲು ಅವರಿಗೆ ಸೂಕ್ತ ಮಾರ್ಗದರ್ಶನ
ವನ್ನು ನೀಡುವದು. ಶಾಲೆಯ ಶಿಕ್ಷಕವೃಂದದ ಮೂಲ ಭೂತ
ಜೋಣೆಗಾರಿಕೆಯಾಗಿದೆ. ಇದಕ್ಕಾಗಿ ಶಿಕ್ಷಕರು ತಾವೇ ಜೀವಂತ
ನಡೆಗೆ ನಿದರ್ಶನವಾಗಿ ಮಕ್ಕಳ ಮನಸ್ಸನ್ನು ಮಾರ್ಪಡಿಸಬೇಕು.
ಅವರಲ್ಲಿ ರಾಷ್ಟ್ರಪ್ರೇಮ ದೈವಭಕ್ತಿ ಹಾಗೂ ಸಮಾಜ ಸೇವಾ
ಪ್ರಜ್ಞೆಯನ್ನು ಉಂಟುಮಾಡಬೇಕು. ತನ್ಮೂಲಕ ಮಾನವೀಯ
ಮೌಲ್ಯಗಳನ್ನು ಅನುಷ್ಠಾನಕ್ಕೆ ತರಲು ಅವರನ್ನು ಅಣಿಗೊಳಿಸ
ಬೇಕಾಗಿದೆ.

ಈಗಾಗಲೇ ಇದನ್ನು ಸಾಧಿಸಲು ಶಾಲೆಗಳಲ್ಲಿ ನೈತಿಕ ಶಿಕ್ಷಣ
ವನ್ನು ಜಾರಿಗೊಳಿಸಲಾಗಿದೆ. ಇದು ತಾತ್ವಿಕ ವಿವೇಚನೆಯ ಮಟ್ಟ
ದಲ್ಲಿ ಉಳಿದುಕೊಳ್ಳದೆ ಮಕ್ಕಳ ವ್ಯಕ್ತಿತ್ವದಲ್ಲಿ ಬೆಳೆದು ಬರುವಂತೆ
ತನ್ಮೂಲಕ ಜೀವನದುದ್ದಕ್ಕೂ ಅನುಷ್ಠಾನಕ್ಕೆ ತರಲು ನಿರ್ದಿಷ್ಟ
ಕಾರ್ಯಗಳ ಮೂಲಕ ಅವರನ್ನು ಸಜ್ಜುಗೊಳಿಸಬೇಕಾಗಿದೆ. ಇದು
ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯ. ಇದು ಸರಳವೂ ಸ್ವಾಭಾವಿಕವೂ
ಆಗಿರಬೇಕು. ಮಕ್ಕಳ ವಯೋಮಾನಕ್ಕೆ ತಕ್ಕಂತೆ ಸಹಜವಾದ
ನಿತ್ಯಕೆಲಸಗಳಲ್ಲಿ ಅವರನ್ನು ತೊಡಗಿಸಬೇಕು. "ದಿನಕ್ಕೊಂದು
ಒಳ್ಳೆಯ ಕೆಲಸ" ಅಥವಾ "ದಿನಕ್ಕೊಂದು ಸೇವಾ ಕೆಲಸ"
ಇವುಗಳೇ ಸ್ಕೌಟಿಂಗ್, ಗೈಡಿಂಗ್ ಹಾಗೂ ಸೇವಾದಳಗಳ
ಧ್ಯೇಯಗಳಾಗಿರುವವು. ಅದಕ್ಕಾಗಿ ಧಾರವಾಡ ಜಿಲ್ಲೆಯಲ್ಲಿರುವ ಎಲ್ಲ ಹಿರಿಯ

ಪ್ರಾಥಮಿಕ ಶಾಲೆಗಳಲ್ಲಿ ೫ರಿಂದ ೭ನೇ ವರ್ಗದ ಮಕ್ಕಳು ಹಾಗೂ ಪ್ರೌಢ ಶಾಲೆಗಳಲ್ಲಿ ೮ರಿಂದ ೧೦ನೇ ವರ್ಗದ ಮಕ್ಕಳು ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳಲು ಕೆಳಗೆ ಕಾಣಿಸಿದ ಮಾದರಿಯಲ್ಲಿ ಕಾರ್ಯವನ್ನು ಕೈಗೊಳ್ಳಬೇಕಾಗಿದೆ. ಪ್ರಾಜ್ಞ, ನಿಷ್ಠಾವಂತ ಹಾಗೂ ದೇಶಾಭಿಮಾನವುಳ್ಳ ಪ್ರಧಾನ ಗುರುಗಳು ಹಾಗೂ ಶಿಕ್ಷಕರು ಇರುವ ಕಡೆ ಈ ಯೋಜನೆ ಯಶಸ್ವಿಯಾಗುವುದರಲ್ಲಿ ಸಂಶಯವಿಲ್ಲ.

ರಾಷ್ಟ್ರದ ಅರಿವುಳ್ಳ ಹಾಗೂ ರಾಷ್ಟ್ರದ ನಿರ್ಮಾಪಕರಾದ ಗುರುವೃಂದ ಸುಭದ್ರವಾದ ರಾಷ್ಟ್ರನಿರ್ಮಾಣಕ್ಕೆ ನೆರವಾಗದಿದ್ದಲ್ಲಿ ಮತ್ತಾರು ರಾಷ್ಟ್ರದ ರಕ್ಷಣೆ ಹೊರಬಲ್ಲರು?

"ಮುಂದಿನ ರಾಷ್ಟ್ರವನ್ನು ಇಂದಿನ ಶಾಲಾ ತರಗತಿಯಲ್ಲಿ ನಿರ್ಮಿಸಿ"ರಾಷ್ಟ್ರ ಎಂತಹ ಪ್ರತಿಭಾನ್ವಿತ ವ್ಯಕ್ತಿಗಳಿಂದ ನಿರ್ಮಿತ್ತವಾಗಬೇಕೋ ಅಂತಹ ಪ್ರತಿಭಾನ್ವಿತ ವ್ಯಕ್ತಿಗಳ ನಿರ್ಮಾಣಕ್ಕೆ ಇಂದಿನ ಶಾಲಾ ತರಗತಿಗಳಲ್ಲಿ ತಳಹದಿ ಹಾಕಬೇಕು. ನೈತಿಕತೆಯ ಆಧಾರದ ಮೇಲೆ ರೂಪಿತವಾದ ವ್ಯಕ್ತಿಯ ವ್ಯಕ್ತಿತ್ವ, ಭಾವಿ ಜನಾಂಗವನು ನಿಸ್ವಾರ್ಥಿಯನ್ನಾಗಿ ಮಾಡಿ ಸಮಾಜ ಕಲ್ಯಾಣ ಹಾಗೂ ಸುಖಿ ರಾಜ್ಯಸ್ಥಾಪನೆಗೆ ನೆರವಾಗುತ್ತದೆ.

ಮಾನವ ಸಂಪತ್ತು ನಿಜವಾದ ರಾಷ್ಟ್ರದ ಸಂಪತ್ತು. ಪ್ರತಿಯೊಬ್ಬ ವ್ಯಕ್ತಿಯಲ್ಲಿರುವ ದೇಹಕ್ಕೆ ಸಂಬಂಧಿಸಿದ ದೈಹಿಕ ಶಕ್ತಿ ಮನಸ್ಸಿಗೆ ಸಂಬಂಧಪಟ್ಟ ವೈಜ್ಞಾನಿಕ ಶಕ್ತಿ ಹಾಗೂ ಹೃದಯಕ್ಕೆ ಸಂಬಂಧಿಸಿದ ಆಧ್ಯಾತ್ಮಿಕ ಶಕ್ತಿಗಳ ಶೋಧನೆ ನಡೆಸಿ ಅವುಗಳ

ಸರ್ವತೋಮುಖವಾದ ಪ್ರಗತಿ ಶ್ರಮಿಸಬೇಕಾದದ್ದು ಉಪಾಧ್ಯಾ
ಯನ ಹೆಮ್ಮೆಯು ಕರ್ತವ್ಯ. ಭಾರತ ಅತ್ಯಂತ ಸುಸಂಸ್ಕೃತ ರಾಷ್ಟ್ರ
ವಾಗಿದ್ದರೂ ದಾರಿದ್ರ್ಯತೆ ಇಲ್ಲಿ ತಾಂಡವವಾಡಲು ಮಾನವ ಕುಲದ
ಈ ತ್ರೈಶಕ್ತಿಗಳು ವಿಕಸಿತವಾಗದೆ ನಶಿಸಿ ಹೋಗುತ್ತಿರುವುದೇ
ಾರಣ ಅವು ವಿಕಸಿತವಾದಾಗಲೇ ಸಾಕ್ರೆಟೀಸನಂತಹ ತತ್ವ
ಜ್ಞಾನಿಗಳೂ; ರಾಮಕೃಷ್ಣ ವಿವೇಕಾನಂದರಂತಹ ವೇದಾಂತಿಗಳೂ
ಸು-ಪೈಗಂಬರ. ಬುದ್ಧ–ಬಸವಣ್ಣನವರಂತಹ ಮತಪ್ರವರ್ತಕರೂ
ವಾಹರ-ಸುಭಾಸಚಂದ್ರ ಬೋಸರಂತಹ ರಾಷ್ಟ್ರಭಕ್ತರೂ: ಕಾಳಿ
ಾಸ ರವೀಂದ್ರರಂತಹ ಕವಿಪುಂಗವರೂ: ಆರ್ಯಭಟ-ಜಗದೀಶಚಂದ್ರ
ಬೋಸರಂತಹ ವಿಜ್ಞಾನಿಗಳೂ. ಸರ್ ಎಂ ವಿಶ್ವೇಶ್ವರಯ್ಯರಂತಹ
ಮೇಧಾವಿಗಳೂ ಉದ್ಭವವಾಗುವರು. ಉಪಾಧ್ಯಾಯರು ಶ್ರಮಿಸಿ
ಮಕ್ಕಳಲ್ಲಿ ಅಡಗಿರುವ ಈ ಅಗೋಚರ ತ್ರೈಶಕ್ತಿಗಳನ್ನು ಹೊರತೆಗೆ
ದಲ್ಲಿ ಇಂತಹ ಸಹಸ್ರಾರು ಪ್ರತಿಭಾನ್ವಿತರು ಭಾರತದಲ್ಲಿ ಉದ್ಭವಿಸಿ
ಇಡೀ ಭರತ ಖಂಡವನ್ನೇ ದೇವಮಾನವರ ಖಂಡವನ್ನಾಗಿ ಮಾಡು
ವುದರಲ್ಲಿ ಸಂದೇಹವಿಲ್ಲ. ಅಮೇರಿಕೆಯ ಅಧ್ಯಕ್ಷರಾಗಿದ್ದ ಜಾನ್‌ಕೆನಡಿ
ಹೇಳಿದ ಹಾಗೆ "ರಾಷ್ಟ್ರದಿಂದ ತನಗೇನಾಗಬೇಕು." ಎಂಬುದಕ್ಕೆ ಬದ
ಲಾಗಿ "ತನ್ನಿಂದ ರಾಷ್ಟ್ರಕ್ಕೇನಾಗಬೇಕು." ಎಂದು ಕಾತುರತೆಯಿಂದ
ಕಾತೊರೆಯುವ ಭವ್ಯರಾಷ್ಟ್ರಾಭಿಮಾನಿಗಳನ್ನು ಸೃಜಿಸಬೇಕು.

ಆದ್ದರಿಂದ ಪ್ರತಿ ಮಗುವೂ ಪ್ರತಿದಿನ ಕನಿಷ್ಠ ಒಂದು
ಉತ್ತಮ ಕೆಲಸ ಅಥವಾ ಸೇವಾ ಕೆಲಸ ಮಾಡಬೇಕು. ಹಾಗೆ
ಮಾಡಿದ ಕೆಲಸವನ್ನು ದಿನಾಂಕದೊಂದಿಗೆ ಒಂದು ಸಣ್ಣ ಡೈರಿಯಲ್ಲಿ
ಬರೆದಿಡಬೇಕು. ಉದಾ:

೧. ವಿದ್ಯಾರ್ಥಿನಿಯು ತಾನು ಮನೆಯಲ್ಲಿ ತಾಯಿಗೆ ಕಸ ಗೂಡಿಸಲು ಅಥವಾ ಪಾತ್ರೆ ತೊಳೆಯುಲು ನೆರವಾಗುವುದು.

೨. ದಾರಿಯಲ್ಲಿ ಬಿದ್ದಿರುವ ಮುಳ್ಳು ಕಲ್ಲು ಗಾಜು ಅಥವಾ ಬಾಳೆಹಣ್ಣಿನ ಸಿಪ್ಪೆಯನ್ನು ತೆಗೆದು ಒಳಚರಂಡಿಗೆ ಹಾಕುವುದು.

೩. ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಹೆಣ್ಣುಮಕ್ಕಳಿಗೆ ಮುದುಕರಿಗೆ ಅಥವಾ ದುರ್ಬಲರಿಗೆ ಸ್ಥಳಾವಕಾಶ ಮಾಡಿಕೊಡು ವುದು.

೪. ಪ್ರೌಢ ಶಾಲೆಯ ಮಗುವು ಅನಕ್ಷರಸ್ಥರಿಗೆ ಬಂದ ಪತ್ರ ವನ್ನು ಓದಿಹೇಳುವುದು.

೫. ಅಪರಿಚಿತರಿಗೆ ಸರಿಯಾದ ಓಣಿ ಮನೆ ಅಥವಾ ಆಫೀಸಿನ ವಿವರ ಕೊಡುವುದು .

೬. ಗಿಡಗಳಿಗೆ ನೀರು ಹಾಕುವದು.

೭. ಪ್ರಯಾಣಿಕರು ಬಾಯಾರಿ ಬಂದರೆ ನೀರನ್ನೊದಗಿಸು ವುದು.

೮. ಬಾಯಾರಿ ಬಂದ ಪ್ರಾಣಿಗಳಿಗೆ ನೀರನ್ನೊದಗಿಸುವುದು. ಇತ್ಯಾದಿ. ಪ್ರತಿದಿನ ಶಾಲೆಯನ್ನು ಸುಮಾರು ೫ ನಿಮಿಷ ಮುಂಚಿತ ವಾಗಿ ಪ್ರಾರಂಭಿಸಿ ಮಕ್ಕಳು ತಮ್ಮ ಡೈರಿಯಲ್ಲಿ ತಾರೀಖಿನ್ನು ಹಾಕಿ ಬರೆದಿರುವ ಪ್ರತಿಯೊಬ್ಬರ ದಿನಚರಿಯನ್ನು ವರ್ಗದ ಶಿಕ್ಷ ಕರು ಓದಿಸಿ ಕೇಳಬೇಕು. ಮೆಚ್ಚುಗೆ ವ್ಯಕ್ತಪಡಿಸಿ ಅವಶ್ಯವಿದ್ದಾಗ ಸೂಕ್ತ ಮಾರ್ಗದರ್ಶನದೊಂದಿಗೆ ಅವರನ್ನು ಪ್ರೋತ್ಸಾಹಿಸಬೇಕು.

ತಿ ದಿನವೂ ತಾವು ಮಾಡಿದ ಒಳ್ಳೆಯ ಕೆಲಸವನ್ನು ಡೈರಿಯಲ್ಲಿ
ಕ್ಕಳು ತಾರೀಖು ಹಾಕಿ ಬರೆಯಬೇಕು. ಇದು ಬಹು ಮುಖ್ಯ
ವದ್ದು. ಇದು ಪ್ರತಿ ದಿನದ ಕೆಲಸಗಳಲ್ಲಿ ಒಂದಾಗಬೇಕು.

ಈ ರೀತಿ ಮಾಡದಿದ್ದಲ್ಲಿ ಮಕ್ಕಳು ಮಾಡುವ ದೈನಿಕ ಕೆಲಸ
ಳನ್ನು ಅರಿಯುವ ಅವಕಾಶ ಉಪಾಧ್ಯಾಯರುಗಳಿಗೆ ದೊರಕದೆ
ಕ್ಕಳು ಕೆಲವು ದಿನಗಳ ನಂತರ ತಾವು ಮಾಡುವ ಕೆಲಸಕ್ಕೆ
ರೋತ್ಸಾಹವಿಲ್ಲವೆಂದು ಭಾವಿಸಿ ಮಾಡುವ ಕೆಲಸವನ್ನು ನಿಲ್ಲಿಸ
ಹುದು.

ಇಷ್ಟೇ ಅಲ್ಲದೆ ಉದಾತ್ತ ವಿಚಾರಗಳನ್ನು ಮಕ್ಕಳಲ್ಲಿ ಬೆಳವ
ಸಲು ಮಹಾನ್ ವ್ಯಕ್ತಿಗಳ ಜೀವನ ಮತ್ತು ಸಾಧನೆಗಳನ್ನು ನೀತಿ
ಾಠದ ವೇಳೆಯಲ್ಲಿ ತಿಳಿಸಿಕೊಡಬೇಕು. ತಮ್ಮ ಜೀವನಲ್ಲಿ ಅವು
ಳನ್ನು ಅಭಿವ್ಯಕ್ತಗೊಳಿಸಲು ಸನ್ನಿವೇಶಗಳನ್ನು ಒದಗಿಸಬೇಕು.
ತಿದಿನವೂ ಕನಿಷ್ಠ ಪಕ್ಷ ಒಂದು ಒಳ್ಳೆಯ ಕೆಲಸವನ್ನು ಮೇಲೆ
ಳಿಸಿದ ಹಾಗೆ ಮಾಡಿಸಬೇಕು. ಒಂದಕ್ಕಿಂತ ಹೆಚ್ಚಿಗೆ ಒಳ್ಳೆಯ
ಲಸ ಮಾಡುವದನ್ನು ಪ್ರೋತ್ಸಾಹಿಸಬೇಕು. ೫ ನೇ ತರಗತಿಯಿಂದ
೦ ನೇ ತರಗತಿಯ ವರೆಗೂ ಇರುವ ವಿದ್ಯಾರ್ಥಿಗಳು ಇವನ್ನು
ಪ್ಪದೆ ಮಾಡಬೇಕು. ಜ್ಯೂನಿಯರ ಕಾಲೇಜು ವಿದ್ಯಾರ್ಥಿ—
ದ್ಯಾರ್ಥಿನಿಯರು ಮುಂದೆ ಇಂತಹ ಕಾರ್ಯಗಳನ್ನು ಮಾಡುವಂತೆ
ರೋತ್ಸಾಹಿಸಬೇಕು. ಪ್ರೈಮರಿ ೩ ರಿಂದ ೪ ನೆಯ ತರಗತಿಯ
ಕ್ಕಳು ತಾವು ಪ್ರತಿದಿನ ಮಾಡುವ ಒಳ್ಳೆಯ ಕೆಲಸಗಳನ್ನು ವರದಿ
ಪ್ಪಿಸಿದರೆ ಸಾಕು. ಅವರು ಡಾಯರಿಯಲ್ಲಿ ಬರೆಯಬೇಕಾದ
ವಶ್ಯಕತೆ ಇಲ್ಲ.

ಇಂತಹ ಹತ್ತಾರು ಕೆಲಸಗಳನ್ನು ನಮ್ಮ ಮಕ್ಕಳು ಪ್ರತಿ ನಿತ್ಯವೂ ಮಾಡುತ್ತಿರುವಾಗ ಇದನ್ನು ಯೋಜನೆಯೆಂದು ಕರೆಯುವ ಔಚಿತ್ಯವೇನು ಎಂದು ಕೆಲವರಿಗೆ ಸಂಶಯ ಬರಬಹುದು. ಇಂತಹ ನೂರಾರು ಕೆಲಸಗಳನ್ನು ಮಾಡುವದು ಮುಖ್ಯವಲ್ಲ. "ನಾನು ಪವಿತ್ರವಾದ ಕೆಲಸವನ್ನು ಮಾಡಬೇಕು." ಎಂಬ ಚಿಂತನೆಯನ್ನು ಮಕ್ಕಳ ಮನಸ್ಸಿನಲ್ಲಿ ಅಂಕುರ ಮಾಡುವದು. ಇದು ಮುಖ್ಯ. ಬಾಲ್ಯದಿಂದ ಇಂತಹ ಸತ್ಕಾರ್ಯಗಳ ಚಿಂತನೆಯಲ್ಲಿ ತೊಡಗಿರುವ ಮಕ್ಕಳ ವ್ಯಕ್ತಿತ್ವವು ಮಹತ್ತರವಾಗಿ ಪರಿವರ್ತನೆಯಾಗುತ್ತದೆ. ಇಂದಿನ ಶಿಶುವು ಮುಂದಿನ ಪಿತನ ಜನಕನಾದಾಗ ಯಾವ ಚಿಂತನೆಯಿಂದ ಶಿಶುವಿನ ಶೈಶವಾವಸ್ಥೆ ಬೆಳೆದು ಬಂದಿದೆಯೋ ಆ ಚಿಂತನೆಯೇ ಅವನ ವ್ಯಕ್ತಿತ್ವವನ್ನು ಹದಮಾಡಿ ಅವನನ್ನು ರಾಷ್ಟ್ರದ ಸತ್ಪ್ರಜೆಯನ್ನಾಗಿ ಪರಿವರ್ತಿಸುತ್ತದೆ. ಮಕ್ಕಳ ಮನಸ್ಸಿನಲ್ಲಿ ಅಂತಹ ಚಿಂತನೆಯನ್ನು ಅಂಕುರ ಮಾಡುವದೇ ಈ ಯೋಜನೆಯ ಮಹೋನ್ನತ ಉದ್ದೇಶ.

ಈ ಒಳ್ಳೆಯ ಕೆಲಸ ಮಾಡುವ ಮನೋಪ್ರವೃತ್ತಿ ಮಕ್ಕಳ ಮನಸ್ಸಿನಲ್ಲಿರೆಝೇಂಕರಿಸಿದಾಗಲೇ ಸತ್ವಪೂರಿತವಾದ ಜನಾಂಗಭಾವೀ ಭಾರತದಲ್ಲಿ ಸೃಜನಗೊಂಡಂತಾಗುವದು. ಜನತೆಯ ಅಧಃಪತನವನ್ನು ರಕ್ಷಿಸಿದಂತಾಗುವುದು. ಆಗಲೇ ಇಂದಿನ ಮನೆಯ ಮುದ್ದು ಮಣಿಗಳು ನಾಡಿನ ಹೆಮ್ಮೆಯ ವಿದ್ವನ್ಮಣಿಗಳಾಗಿ ಪ್ರಕಾಶಿಸುವದು. ಆಗಲೇ ಇಂತಹ ಪ್ರತಿಭಾನ್ವಿತ ಮಾನವ ಸಂಪತ್ತನ್ನು ದೇಶಾಭ್ಯುದಯದ ಕಡೆ ಹರಿಸಿದಂತಾಗುವದು. ಆಗಲೇ ದೈಹಿಕ ವೈಜ್ಞಾನಿಕ ಹಾಗು ಆಧ್ಯಾತ್ಮಿಕ ಶಕ್ತಿಗಳೆಲ್ಲವನ್ನೂ ಉತ್ಕೃಷ್ಟವಾಗಿ ಬೆಳೆಸಿಕೊಂಡು ಅದನ್ನು ನಾಡಿನ ಅಭ್ಯುದಯಕ್ಕೆ ಉಪಯೋಗಿಸಲು ವೀರ ಸಂಕಲ್ಪ

ಾಡುವ ಜನತೆಯು ಆವಿರ್ಭಾವವಾಗುವದು. ಆಗಲೇ ಇಂದಿನ
ಪಾಧ್ಯಾಯ ರಾಷ್ಟ್ರದ ಧರ್ಮಗುರುವಾಗಿ ಕಂಗೊಳಿಸುವದು.
ಗಲೇ ಸತ್ಕಾರ್ಯವಾಡುವ ಮನೋಪ್ರವೃತ್ತಿ ಮಕ್ಕಳಲ್ಲಿ ಬೆಳೆದು
ಂದು ವಿಘಾತಕಾರಕ ಮನೋಪ್ರವೃತ್ತಿ ದಮನವಾಗುವುದು.
ಗಲೇ ತಾನು ಕಲಿತ ವಿದ್ಯೆಯಿಂದ ತನ್ನಲ್ಲಡಗಿರುವ ಸುಪ್ತ
ತನ್ಯಗಳನ್ನೆಲ್ಲಾ ಪ್ರಫುಲ್ಲಿತವಾಗಿ ಬೆಳೆಸಿಕೊಂಡು ರಾಷ್ಟ್ರ ವಿಪತ್ತಿಗೆ
ಕ್ಕಿದಾಗ ಅದನ್ನು ರಕ್ಷಿಸಲು ಪ್ರತಿಯೊಬ್ಬ ವ್ಯಕ್ತಿಯೂ ಟೊಂಕಕಟ್ಟಿ
ಲ್ಲುವುದು.

ಆದ್ದರಿಂದಲೇ ಇಡೀ ಉಪಾಧ್ಯಾಯ ವೃಂದವು ಕಂಕಣ
ದ್ಧವಾಗಿ ನಿಂತು ಈ ಮಹತ್ತರವಾದ ಯೋಜನೆಯನ್ನು ಸಾರ್ಥಕ
ಳಿಸಬೇಕು. ರಾಷ್ಟ್ರೀಯ ಹಬ್ಬಗಳ ಆಚರಣೆಯಲ್ಲಿ ಮತ್ತು
ಹಾನ್ ವ್ಯಕ್ತಿಗಳ ಜಯಂತ್ಯುತ್ಸವಗಳಲ್ಲಿ ಅತಿ ಹೆಚ್ಚು ಒಳ್ಳೆಯ
ೇವಾಕಾರ್ಯ ಮಾಡಿದ ಮಗುವಿಗೆ ಸೂಕ್ತ ಬಹುಮಾನವಿತ್ತು
ರೋತ್ಸಾಹಿಸಬೇಕು.

ಈಗಾಗಲೇ ಈ ಜಿಲ್ಲೆ ೯೦ರಷ್ಟು ಪ್ರಾಯಮರಿ ಶಾಲೆ
ಗಳಲ್ಲಿಯೂ, ಶೇಕಡಾ ೩೦ ರಷ್ಟು ಹೈಸ್ಕೂಲುಗಳಲ್ಲಿಯೂ ಈ
ೋಜನೆಯನ್ನು ತೆಗೆದುಕೊಂಡು ಯಶಸ್ವಿಮಾಡಿದೆ. ಇದ
ದ ಮಕ್ಕಳಲ್ಲಿ ಒಳ್ಳೆಯ ಕೆಲಸ ಮಾಡಬೇಕೆಂಬ ಭಾವನೆಯ
ವಣಿಗೆಯ ಜೊತೆಯಲ್ಲಿ ದಿನಚರಿ ಬರೆಯುವ ಅಭ್ಯಾಸವು ಸಹ
ರತೊಡಗಿದೆ.

## ೪ ಆದರ್ಶ ಶಾಲೆಗಳು

ಮಕ್ಕಳ ಸರ್ವತೋಮುಖ ಪ್ರಗತಿಯಾಗುವಂತೆ ಮಾಡುವುದೇ ಶಾಲೆಯ ಗುರಿಯಾಗಿದ್ದು ಕೆಲವು ಶಾಲೆಗಳನ್ನು ಆದರ್ಶ ಶಾಲೆಗಳನ್ನಾಗಿ ಮಾಡಲು ಪ್ರಯತ್ನ ಪಟ್ಟಿದೆ. ಈ ರೀತಿ ಆದರ್ಶ ಶಾಲೆಯಾಗಿ ಪರಿವರ್ತನೆಗೊಂಡ ಪ್ರತಿ ಶಾಲೆಯೂ ಈ ಕೆಳಗೆ ಸೂಚಿಸಿದ ಆದರ್ಶಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಬೇಕಾಗಿರುತ್ತದೆ. ಈ ಯಾದಿಗೆ ಶಾಲೆಯ ಪ್ರಗತಿಗೆ ಅವಶ್ಯವೆನಿಸುವ ಇನ್ನಿತರ ಸಂಗತಿಗಳನ್ನು ಸೇರಿಸಿಕೊಳ್ಳಬಹುದು. ಈ ಹಿಂದೆ ಚರ್ಚಿಸಿದ ಸಂಗತಿಗಳನ್ನೆಲ್ಲ ಅನುಷ್ಠಾನಕ್ಕೆ ತರುವದೇ ಆದರ್ಶ ಶಾಲೆಗಳ ಗುರಿ. ಆ ಎಲ್ಲ ಸಂಗತಿಗಳನ್ನು ಕೆಳಗಿನಂತೆ ಕ್ರೋಢೀಕರಿಸಬಹುದು.

**ಅ) ಶಾಲೆಗೆ ಸಂಬಂಧಿಸಿದ ಸಂಗತಿಗಳು :**

೧. ಮಕ್ಕಳ ಸಂಖ್ಯೆಯನ್ನು ಹೆಚ್ಚಿಸಬೇಕು. ಗಣನೆಯಾದ ಮಕ್ಕಳೆಲ್ಲಾ ಶಾಲೆಗೆ ಬರಬೇಕು.

೨. ಶಾಲೆಗೆ ಸ್ವಂತ ಕಟ್ಟಡವಿದ್ದು ಸುತ್ತಲೂ ಬೇಲಿಹಾಕಲ್ಪಟ್ಟಿರಬೇಕು.

೩. ಶಾಲೆಯಲ್ಲಿ ಕನಿಷ್ಠ ಪಕ್ಷಕ್ಕೆ ಶಿಕ್ಷರ ಸಂಖ್ಯೆಯಷ್ಟಾದರೂ ತೆಂಗಿನ ಸಸಿಗಳಿರಬೇಕು.

೪. ಸಸಿಗಳ ಮೇಲ್ವಿಚಾರಣೆ ಹಾಗೂ ಪೋಷಣೆ ಮಕ್ಕಳಿಗೆ ವಹಿಸಿಕೊಟ್ಟಿರಬೇಕು.

೫. ಎಲ್ಲ ಮಕ್ಕಳಿಗೂ ಕೂಡ್ರಲು ಮಣೆಗಳು ಪೂರೈಸಲ್ಪಡ
ಬೇಕು.

೬. ಶಾಲೆಯಲ್ಲಿ ನಿಲವು ಕನ್ನಡಿ ಹಾಗೂ ಕುಡಿಯಲು ನೀರಿನ
ಸಮರ್ಪಕ ವ್ಯವಸ್ಥೆಯಾಗಬೇಕು.

೭. ಶಾಲೆಯಲ್ಲಿ ಉಪಹಾರದ ಯೋಜನೆ ನಡೆಯುತ್ತಿರಬೇಕು.

೮. ಶಾಲೆಯು ತನ್ನ ಸಂಸ್ಥಾಯೋಜನೆ ಮಾಡಿಕೊಂಡು
ಕಾರ್ಯೋನ್ಮುಖವಾಗಿರಬೇಕು.

೯. ಶಾಲೆಯಲ್ಲಿ ಮಂತ್ರಿಮಂಡಳವಿದ್ದು ಅದರ ಮುಖಾಂತರ
ಲ್ಲಿ ಕೆಲಸಕಾರ್ಯಗಳು ನಡೆಯುತ್ತಿರಬೇಕು.

೧೦. ನಿತ್ಯ ಚಟುವಟಿಕೆಗಳಾದ ಸ್ವಚ್ಛತೆ ಪ್ರಾರ್ಥನೆ ಇತ್ಯಾದಿ
ಸ್ತಿನಿಂದ ನಡೆಯುತ್ತಿರಬೇಕು. ಪ್ರತಿಯೊಬ್ಬ ಉಪಾಧ್ಯಾಯರು
ಕಡ್ಡಾಯವಾಗಿ ಪ್ರಾರ್ಥನೆಯಲ್ಲಿ ಭಾಗವಹಿಸಬೇಕು.

೧೧. ಶಾಲೆ ಹಾಗೂ ಸುತ್ತಲಿನ ಆವರಣ ಚೊಕ್ಕಟವಾಗಿರ
ಬೇಕು. ಸ್ವಚ್ಛತೆ ಕಾಯ್ದುಕೊಳ್ಳಬೇಕು. ಕಸದ ಬುಟ್ಟಿಗಳ ವ್ಯವಸ್ಥೆ
ಇರಬೇಕು.

೧೨. ಶಾಲೆಗೆ ಕೈತೋಟವಿರಬೇಕು.

೧೩. ಶಾಲೆಯ ಮಕ್ಕಳು ಹಾಗೂ ಶಿಕ್ಷಕರು ಸಮವಸ್ತ್ರಧಾರಿಗ
ಳಾಗಿರಬೇಕು.

೧೪. ಶಾಲೆಯಲ್ಲಿ ಸ್ಕೌಟ, ಸೇವಾದಳ, ಬಾಲವೀರ ದಳಗಳಿರಬೇಕು.

೧೫. ದಿನಕ್ಕೊಂದು ಒಳ್ಳೆಯ ಕೆಲಸದ ಯೋಜನೆ ಕಾರ್ಯಾಚರಣೆಯಲ್ಲಿರಬೇಕು. ಇದರ ಜೊತೆಗೆ ನೈತಿಕ ಶಿಕ್ಷಣದ ವ್ಯವಸ್ಥೆ ಇರಬೇಕು.

೧೬. ಶಾಲೆಯಲ್ಲಿ ಸಮಯನಿಷ್ಠೆ ಯೋಜನೆ ಜಾರಿಯಲ್ಲಿದ್ದು ಮಕ್ಕಳ ಹಾಜರಾತಿ ಯಾವ ಕಾಲಕ್ಕೂ ಶೇಕಡ ೮೦ ಕ್ಕಿಂತ ಕಡಿಮೆಯಾಗಬಾರದು.

೧೭. ಮಕ್ಕಳು ಶಾಲೆಯಲ್ಲಿ ಆಟದ ಮೈದಾನದಲ್ಲಿ ಹಾಗೂ ಇತರೆಡೆಗಳಲ್ಲಿ ಶಿಸ್ತಿನಿಂದ ವರ್ತಿಸುವಂತೆ ಆಗಬೇಕು.

೧೮. ಮಕ್ಕಳು ಶಾಲೆಯಲ್ಲಿ ರಾಷ್ಟ್ರಗೀತೆಯನ್ನು ಸಾಮೂಹಿಕವಾಗಿ ಚೆನ್ನಾಗಿ ಅನ್ನಲು ಕಲಿತಿರಬೇಕು

೧೯. ಆದರ್ಶ ನೈತಿಕತೆಯ ಮೌಲ್ಯಗಳು ಮಕ್ಕಳಲ್ಲಿ ಕಂಡುಬರಬೇಕು.

೨೦. ಶಾಲೆಯು ಶಾಲಾ ಸಂಕಿರಣ ಯೋಜನೆಯಲ್ಲಿ ಸೇರಿಕೊಂಡು ಕಾರ್ಯ ಸಾಗಿಸುತ್ತಿರಬೇಕು.

೨೧. ಶಾಲಾ ಸುಧಾರಣಾ ಸಮಿತಿ ಹಾಗೂ ಸಮಾಜ ಶಾಲೆಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವಂತಾಗಬೇಕು.

೨೨. ಶಿಕ್ಷಕರಲ್ಲಿ ಸಹಕಾರ, ವಿಧೇಯತೆ ಎದ್ದು ಕಾಣುತ್ತಿರಬೇಕು

೨೩. ಮಕ್ಕಳ ದೈಹಿಕ ಬೆಳವಣಿಗೆಗೆ ದೈಹಿಕ ಶಿಕ್ಷಣದ ವ್ಯವಸ್ಥೆ ಮಾಡಬೇಕು.

೨೪. ಶಾಲೆಗೆ ಅವಶ್ಯವಾದ ಎಲ್ಲಾ ವಸ್ತುಗಳನ್ನು ಪೂರೈಸಬೇಕು.

## ಬ) ಗುಣ ಮಟ್ಟಕ್ಕೆ ಸಂಬಂಧಿಸಿದ ಅಂಶಗಳು :

೧. ವರ್ಗದಲ್ಲಿ ಶೇಕಡ ೮೦ ರಷ್ಟು ಮಕ್ಕಳಾದರೂ ವರ್ಗದ ಮಟ್ಟಕ್ಕೆ ಅರ್ಹರಿರಬೇಕು.

೨. ಆಯಾ ವಿಷಯದ ಮೂಲ ತಿಳುವಳಿಕೆಗಳು ಸರಿಯಾಗಿರಬೇಕು.

೩. ೧ ಮತ್ತು ೨ನೆಯ ವರ್ಗಗಳಲ್ಲಿ ಸ್ಪಷ್ಟ ಉಚ್ಚಾರದೊಂದಿಗೆ ಪೂರ್ಣ ಮಾತಿನಲ್ಲಿ ಉತ್ತರಿಸುವ ರೂಢಿ ಹೊಂದಿರಬೇಕು. ೨) ಮಕ್ಕಳು ಕನಿಷ್ಠ ಪಕ್ಷಕ್ಕೆ ೮–೧೦ ನೀತಿಪರ ಕಥೆಗಳನ್ನು ಚೆನ್ನಾಗಿ ಹೇಳಲು ರೂಢಿ ಮಾಡಿಕೊಂಡಿರಬೇಕು. ಗೀತೆಗಳನ್ನು (ಪದ್ಯ ಹಾಗೂ ಜನರಲ್) ಸಾಮೂಹಿಕವಾಗಿ ಸುಶ್ರಾವ್ಯವಾಗಿ ಸಾಭಿನಯದೊಂದಿಗೆ ಹೇಳಲು ಸಮರ್ಥರಿರಬೇಕು. ಅಕ್ಷರಗಳನ್ನು ಗುರುತಿಸಿ ಓದುವ ರೂಢಿ ಮಾಡಿಕೊಳ್ಳಬೇಕು. ಅಂಕಿಗಳ ಜ್ಞಾನ, ಸಂಖ್ಯಾ ಲೇಖನ ಹಾಗೂ ಗಣಿತದ ಮೂಲಭೂತ ಕ್ರಿಯೆಗಳ ತಿಳುವಳಿಕೆ ಚೆನ್ನಾಗಿ ಆಗಿರಬೇಕು. ಎಲ್ಲ ವಿದ್ಯಾರ್ಥಿಗಳು ಕಠಿಣ ಶಬ್ದಗಳನ್ನು ಕಪ್ಪು ಹಲಿಗೆಯ ಮೇಲೆ ಬರೆಯಲು ಸಮರ್ಥರಾಗಬೇಕು.

೪. ಗಣಿತದಲ್ಲಿ ಮೌಖಿಕ ಉದಾಹರಣೆಗಳನ್ನು ಶೀಘ್ರವಾಗಿ ಬಿಡಿಸಲು ಶಕ್ತರಾಗಬೇಕು.

೫. ಇಂಗ್ಲೀಷ ಭಾಷೆಯಲ್ಲಿ ಹೆಚ್ಚಿನ ಮಟ್ಟದ ಡ್ರಿಲ್ಲಿಂಗ ಆಗ ಬೇಕು.

೬. ಮಕ್ಕಳು ಪರಿಸರದ ನಿರೀಕ್ಷಣೆ ಮಾಡಿದವರಾಗಿರಬೇಕು.

೭. ಮಕ್ಕಳು ವಸ್ತುಗಳನ್ನು ಎಣಿಸುವದು.ಅಳತೆ ಮಾಡುವದು, ಆಕೃತಿಗಳನ್ನು ಗುರುತಿಸುವುದು ಇವುಗಳನ್ನು ಪ್ರತ್ಯಕ್ಷ ಮಾಡ ಬೇಕು.

೮. ವಿಜ್ಞಾನ ಬೋಧನೆಗೆ ಅನುಕೂಲವಾಗುವಂತೆ ಸ್ಥಳೀಯ ಯೋಜಿಸಲಾದ ಉಪಕರಣಗಳನ್ನು ಅಥವಾ ಪೂರೈಸಲಾದ ಕಿಟ್ ಗಳಲ್ಲಿಯ ಉಪಕರಣಗಳನ್ನು ಉಪಯೋಗಿಸಿ ಪ್ರಯೋಗ ಮಾಡ ಬೇಕು.

೯. ಪಠ್ಯ ಪುಸ್ತಕಗಳಲ್ಲಿ ಸೂಚಿಸಲಾದ ಚಟುವಟಿಕೆಗಳನ್ನು ಶಾಲೆಯಲ್ಲಿ ಮಾಡಿಸಬೇಕು.

೧೦. ಶಾಲೆಯಲ್ಲಿ ವಿಜ್ಞಾನ ಚಟುವಟಿಕೆಗಳನ್ನು ಸುಲಭ ಮಾತಿ ನಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯ ಪಡೆದಿರಬೇಕು.

೧೧. ಭಾಷೆಯಲ್ಲಿ ವಿಚಾರಗಳನ್ನು ಸುಲಭ ಮಾತಿನಲ್ಲಿ ವ್ಯಕ್ತ ಪಡಿಸುವ ಸಾಮರ್ಥ್ಯಪಡೆದಿರಬೇಕು.

೧೨. ಕನ್ನಡ ಇಂಗ್ಲೀಷ ಹಿಂದೀ ಹಾಗೂ ಇತರ ಮಾತೃ ಭಾಷೆ ಯಲ್ಲಿ ಬರವಣಿಗೆ ಸುಧಾರಿಸಲು ಕಡ್ಡಾಯವಾಗಿ ಕಾಪಿ ಬರೆಯಿಸು ತ್ತಿರಬೇಕು.

೧೩. ಸಮಾಜ ಪರಿಚಯ ಪಾಠಗಳ ಬೋಧನೆಯಲ್ಲಿ ವಿಷಯಕ್ಕೆ ಕ್ಕಂತೆ ಬಾಹ್ಯ ರೇಖೆಯ ನಕಾಶ ತೆಗೆಯಿಸಿ ಮಾಹಿತಿ ತುಂಬಿಸ ೇಕು. ಚರಿತ್ರೆಗಳಲ್ಲಿ ಚಾರಿತ್ರಿಕ ಪುರುಷರ ಜೀವನದ ಮೌಲ್ಯಗಳ ಡೆಗೆ ಹೆಚ್ಚು ಗಮನ ಕೊಡುವಂತೆ ನೋಡಿಕೊಳ್ಳಬೇಕು.

೧೪. ಬೋಧನೆಯಲ್ಲಿ 'ಜ್ಞಾನಾಂಶದ ಜೊತೆಗೆ ತಿಳುವಳಿಕೆಯು ಯು ಕುಶಲತೆ ಹಾಗೂ ವ್ಯಕ್ತಿತ್ವದ ಅಂಶಗಳು ಬೆಳೆದು ಬರುವುದರ ಡೆಗೆ ಗಮನವೀಯುಬೇಕು.

೧೫. ಶಾಲೆಗೆ ಪೂರೈಸಲಾದ "ಪ್ರಶ್ನಾವಳಿ" ಬ್ಯಾಂಕಿನ ಯೋಜನೆ ಯನ್ನು ಕಡ್ಡಾಯವಾಗಿ ಅನುಷ್ಠಾನಕ್ಕೆ ತರಬೇಕು.

## . ಶಾಲೆಗೆ ಒಂದು ಶಾಲಾಧ್ವಜ

ಮಕ್ಕಳಲ್ಲಿ ಸಮಯನಿಷ್ಠೆ, ಶಿಸ್ತು, ಶಾಲಾಭಿಮಾನ,ಒಗ್ಗಟ್ಟು ಹಕಾರ, ಧ್ಯೇಯನಿಷ್ಠೆ, ವ್ಯಕ್ತಿತ್ವ–ಮುಂತಾದ ಗುಣಗಳನ್ನು ಬೆಳೆಸ ೇಕಾದರೆ ಶಾಲಾಧ್ವಜ ಬಹಳಷ್ಟು ಸಹಾಯಕಾರಿಯಾಗುತ್ತದೆ. ದ ಕಾರಣ ಧಾರವಾಡ ಜಿಲ್ಲೆಯಲ್ಲಿಯ ಪ್ರತಿಯೊಂದು ಪ್ರಾಥ ಕ ಶಾಲೆಗೆ ಉನ್ನತ ಆಶೆ–ಆಕಾಂಕ್ಷೆ–ಆದರ್ಶಗಳನ್ನು ಪ್ರತಿನಿಧಿ ವ ಶಾಲಾಧ್ವಜವನ್ನು ರೂಪಿಸಬೇಕೆಂದು ನಿರ್ಧರಿಸಿ ಧ್ವಜಕ್ಕಾಗಿ ತಿ ರೇಂಜ ತನ್ನದೇ ಆದ ಬಣ್ಣವನ್ನು ಆಯ್ಕೆ ಮಾಡಿಕೊಂಡಿದೆ. ್ವಜದ ಅಳತೆ ೩' × ೨' ಇರಬೇಕು. ತೆರೆದ ಪುಸ್ತಕದಾಕಾರದಿಂದ

ಉದಯಿಸುತ್ತಿರುವ ಸೂರ್ಯ ತನ್ನ ಸಪ್ತಕಿರಣಗಳಿಂದ ಪ್ರಕಾಶ ಬೀರುತ್ತಿರುವದೇ ಧ್ವಜದ ಸಂಕೇತ. ಧ್ವಜದ ಸಂಕೇತಗಳಾದ ತೆರೆದ ಪುಸ್ತಕ ಉದಯಿಸುತ್ತಿರುವ ಬಾಲರವಿ ಸಪ್ತಕಿರಣಗಳಿಗೆ ತಮ್ಮದೇ ಆದ ಮತಿತಾರ್ಥವಿದೆ. ಜ್ಞಾನದ ಸಂಕೇತ ಪುಸ್ತಕ ಮಕ್ಕಳ ತೆರೆದ ಮನಸ್ಸಿನಲ್ಲಿ ಮುಕ್ತಜ್ಞಾನವನ್ನು ಶಾಲೆಯಲ್ಲಿ ಒದಗಿಸಬೇಕಾಗಿದೆ. ಶಾಲೆಗೆ ಅದೇ ಕಾಲಿಡುತ್ತಿರುವ ಮಗು ಸೂರ್ಯನಂತೆ ಬೆಳಗಬೇಕು, ಬೆಳಕನ್ನೀಯಬೇಕು, ತೇಜಸ್ವಿಯಾಗಿರಬೇಕು. ಸಪ್ತಕಿರಣ, ಸಪ್ತಾಶ್ವ, ಸಪ್ತಪದಿ, ಸಪ್ತರ್ಷಿಗಳು, ಸಪ್ತಸಮುದ್ರ, ಸಪ್ತವರ್ಣ ೭ ಪ್ರಾಥಮಿಕ ವರ್ಗಗಳು ಅದಕ್ಕೂ ಹೆಚ್ಚಾಗಿ ಗಾಂಧೀಜಿಯವರು ಹೇಳಿದ ಸಪ್ತ ಸಾಮಾಜಿಕ ಪಾತಗಳ ಆದರ್ಶಗಳನ್ನು ಅ ಳ ವ ಡಿ ಸಿ ಕೊಂ ಡು ಭಾರತ ದೇಶ ಬೆಳೆಯಬೇಕಾಗಿದೆ. ಗಾಂಧೀಜಿಯವರು ಹೆಸರಿಸಿದ ಸಪ್ತಸಾಮಾಜಿಕ ಪಾತಕಗಳನ್ನು ತೊಡೆದು ಹಾಕುವಂತೆ ಶಾಲೆಗಳಲ್ಲಿ ಮಕ್ಕಳಿಗೆ ಬಾಲರವಿಯ ಸಪ್ತಜ್ಞಾನ ಕಿರಣಗಳಿಂದ ಕೂಡಿದ ಶಾಲಾಧ್ವಜವಿರಬೇಕು. (೧)ತತ್ವರಹಿತ ರಾಜಕೀಯ (೨) ದುಡಿಮೆ ಇಲ್ಲದ ಸಂಪತ್ತು (೩) ನೀತಿವಿಹೀನ ವಾಣಿಜ್ಯ (೪) ಶೀಲವಿಲ್ಲದ ಶಿಕ್ಷಣ (೫) ಆತ್ಮಸಾಕ್ಷಿರಹಿತ ಭೋಗ (೬) ಮಾನವತಾಶೂನ್ಯವಿಜ್ಞಾನ (೭) ತ್ಯಾಗವಿಲ್ಲದ ಪೂಜೆಗಳೆಂಬ ಅನಿಷ್ಠಗಳ ಕತ್ತಲೆ ಕಳೆದು ಪರಂಜ್ಯೋತಿ ಬೆಳಗಬೇಕು. ಇಂತಹ ಆದರ್ಶಗಳ ಕಲ್ಪನೆಯನ್ನು ಮಕ್ಕಳಲ್ಲಿ ಮೂಡಿಸಬೇಕೆಂಬುದೇ ಧ್ವಜದ ಸಂಕೇತ. ಧಾರವಾಡ ಜಿಲ್ಲೆಯ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಶಾಲೆಯ ಪ್ರಾರಂಭಕ್ಕೆ ಮುನ್ನ ಶಾಲೆಯ ಧ್ವಜವನ್ನು ಹಾರಿಸಿ ಪ್ರಾರ್ಥನೆಯೊಂದಿಗೆ ಪಾಠಗಳು ಆರಂಭವಾಗುತ್ತವೆ. ಶಾಲಾ ಧ್ವಜದಮೇಲೆ ಅಭಿಮಾನ ಭಕ್ತಿಗಳು

ಿದಾಗ ಸ್ವಾಭಾವಿಕವಾಗಿ ರಾಷ್ಟ್ರಧ್ವಜದ ಮೇಲೂ ಅಭಿಮಾನ ಾಗು ಗೌರವಗಳು ಬೆಳೆಯುತ್ತವೆ. ಈ ಎಲ್ಲಾ ಉದ್ದೇಶದಿಂದ ಯೋಜನೆಯನ್ನು ಅಳವಡಿಸಲಾಗಿದೆ.

## . ಶಾಲಾ ಶಿಕ್ಷಕರ ತರಬೇತಿ

ಮಕ್ಕಳಿಗೆ ಬೋಧಿಸುತ್ತಿರುವ ಶಿಕ್ಷಕರ ಜ್ಞಾನವನ್ನು ಹೆಚ್ಚಿಸ ೋಸುಗ ಈ ಜಿಲ್ಲೆಯ ಪ್ರತಿಯೊಬ್ಬ ಗಣಿತ ಹಾಗು ವಿಜ್ಞಾನ ೋಧಿಸುವ ಉಪಾಧ್ಯಾಯರಿಗೂ ತಾಲ್ಲೂಕ ಮಟ್ಟದಲ್ಲಿ ದಿವಸಗಳ ಕಾಲಾವಧಿಯ ವಿಚಾರ ಸಂಕಿರಣ ಮಾಡಿ ಅವ ಗೆ ಉತ್ತಮ ವಿಷಯ ಪರಿಚಯ ಮಾಡಿಸಿ ಕೊಟ್ಟಿದೆ. ಇದಲ್ಲದೆ ಧ್ಯಕಾಲ ಸೇವಾವಧಿ ತರಬೇತಿಯನ್ನು ಕೊಡಲಾಗಿದೆ. ಇದಲ್ಲದೆ . ಎಲ್. ಟಿ. ಸಿ ಯಲ್ಲಿ ಆಂಗ್ಲ ಭಾಷೆಯನ್ನು ಭೋಧಿಸುವ ಮ ಕೈಕೊಳ್ಳಲಾಗಿದೆ. ಈಗಾಗಲೆ ತರಬೇತಿ ಪಡೆದವರ ಸಂಖ್ಯೆ ೀಗಿದೆ:

| | | |
|---|---|---|
| ೧. | ವಿಜ್ಞಾನ ಗಣಿತ | ೮೮೫ |
| ೨. | ಕಾರ್ಯಾನುಭವ | ೫೭೭ |
| ೩. | ಇತರ ವಿಷಯಗಳು | ೨೪೯ |
| | ಒಟ್ಟು | ೧೭೧೧ |

ಈ ವರ್ಷ ಕೇಂದ್ರ ಶಿಕ್ಷಕರಿಗೆ ಉಪಯುಕ್ತವಾಗುವ ಕೆಳಕಂಡ ೂರು ಕೈಪೊತ್ತಿಗೆಗಳನ್ನು ಪ್ರಕಟಿಸಿರುತ್ತದೆ.

೧. ೭ ನೇ ವರ್ಗದ ಪ್ರಶ್ನೆಭಂಡಾರ

೨. ೫ ನೇ ವರ್ಗದ ಇಂಗ್ಲೀಷ ಅಭ್ಯಾಸ ಪುಸ್ತಕ

೩. ಮೈಕ್ರೊ ಟೈಪಿಂಗ

ಶಿಕ್ಷಕರ ಅನುಕೂಲಕ್ಕಾಗಿ ಧಾರವಾಡ, ಗದಗ, ನರೇಂದ್ರ ಮತ್ತು ಗೋಪನಕೊಪ್ಪದಲ್ಲಿ ಕ್ರೀಡಾ ಸಲಕರಣೆಗಳನ್ನು ಪೂರೈಸಲಾಗಿದೆ.

## ೭. ಶಾಲಾ ಸಮುದಾಯ

ಈ ಯೋಜನೆಯನ್ನು ಈಗ ಈ ಜಿಲ್ಲೆಯಲ್ಲಿ ಯಶಸ್ವಿಯಾಗಿ ಅಳವಡಿಸಲು ವ್ಯವಸ್ಥೆ ಮಾಡಲಾಗಿದೆ. ಇದರಿಂದ ಇಡೀ ಜಿಲ್ಲೆಯ ಎಲ್ಲಾ ಪ್ರೈಮರಿ ಶಾಲಾ ಉಪಾಧ್ಯಾಯರುಗಳಿಗೆ (೧) ಗಣಿತ (೨) ವಿಜ್ಞಾನ (೩) ಸಾಮಾಜಿಕ ಅಭ್ಯಾಸ (೪) ಹಾಗು ಇಂಗ್ಲಿಷ ಈ ವಿಷಯಗಳಲ್ಲಿ ವಿಷಯ ಪರಿಚಯ ಮಾಡಿಕೊಲಾಗುವದು. ಒಂದು ತಿಂಗಳಿಗೊಮ್ಮೆ ಈ ವಿಷಯ ಬೋಧನಾಕ್ರಮ ನಡೆಸಲಾಗುವದು. ಉತ್ತಮವಾದ ಹೈಸ್ಕೂಲಗಳ ಜೊತೆಯಲ್ಲಿ ಅದರ ಪರಿಮಿತಿಗೆ ಬರುವ ಎಲ್ಲಾ ಪ್ರಾಯಮರಿ ಶಾಲಾ ಉಪಾಧ್ಯಾಯರು ತಿಂಗಳಿಗೊಮ್ಮೆ ಸಭೆ ಸೇರುವರು. ನುರಿತ ಹೈಸ್ಕೂಲ ತಜ್ಞರಿಂದ ಮೇಲ್ಕಂಡ ನಾಲ್ಕು ವಿಷಯಗಳಲ್ಲಿ ಇಡೀ ಜಿಲ್ಲೆಯಲ್ಲಿರುವ ಸುಮಾರು ೮೦೦೦ ಉಪಾಧ್ಯಾಯರುಗಳಿಗೆ ಈ ವರ್ಷದಲ್ಲಿ ಮೇಲ್ಕಂಡ ವಿಷಯಗಳಲ್ಲಿ ಕಠಿಣವಾದ ಅಧ್ಯಾಯಗಳ ಮೇಲೆ

ಬೋಧನೆ ಕೊಡಲಾಗಿದೆ. ಈ ಶಾಲಾ ಸಮುದಾಯವನ್ನು ಉಪಾಧ್ಯಾಯರ ಕೇಂದ್ರದ ಸಹಾಯದಿಂದ ನಡೆಸಲಾಗುವದು. ಇದಕ್ಕೆ ಡಿ. ಎಸ್. ಈ. ಆರ್. ಟಿ. ನೆರವಿದೆ. ಇತರ ತರಬೇತಿ ಕೇಂದ್ರಗಳು ತಮ್ಮ ಕೈಲಾದ ನೆರವನ್ನು ವಿಷಯಕ್ಕೆ ಸಂಬಂಧಿಸಿದಂತೆ ಕೊಡುವವು. ಈ ಯೋಜನೆಯಿಂದ ಉಪಾಧ್ಯಾಯ ಬಂಧು-ಭಗಿನಿಯರ ಬೋಧನಾಶಕ್ತಿ ಹಾಗು ವಿಷಯಜ್ಞಾನವನ್ನು ಹೆಚ್ಚಿಸಿದಂತಾಗುವುದು. ಉತ್ತಮವಾದ ನಿರೀಕ್ಷಿತ ಮಟ್ಟದಲ್ಲಿ ಬೋಧನ ಕ್ರಮಕ್ಕೆ ವ್ಯವಸ್ಥೆ ಮಾಡಿದಂತಾಗುವುದು. ಇದು ಯಶಸ್ವಿಯಾಗುವುದರಲ್ಲಿ ಸಂಶಯವಿಲ್ಲ. ಆಗ ಅದು ಒಂದು ಅದ್ಭುತ ಸಾಧನೆಯೇ ಸರಿ. ಈ ಸಾಲಾ ಸಮುದಾಯಗಣ ಅಧ್ಯಕ್ಷರು, ಅಲ್ಲಿಯ ಹೈಸ್ಕೂಲ ಮುಖ್ಯೋಪಾಧ್ಯಾಯರು, ಸಹಾಯಕ ಶಿಕ್ಷಣಾಧಿಕಾರಿಗಳು ಸಂಘಟಕರಾಗಿರುತ್ತಾರೆ.

## ಪ್ರಾಥಮಿಕ ಶಿಕ್ಷಣ ಮತ್ತು ಪ್ರಜಾಪ್ರಭುತ್ವ

ಶಿಕ್ಷಣ ಪ್ರಜಾಪ್ರಭುತ್ವದ ಅಡಿಗಲ್ಲು. ಶಿಕ್ಷಣವಿಲ್ಲದೆ ಪ್ರಜಾಪ್ರಭುತ್ವ ಯಶಸ್ವಿಯಾಗಲಾರದು. ಕಾರಣ, ಪ್ರಜೆಗಳೇ ಪ್ರಭುಗಳಾಗಿರುವ "ಪ್ರಜಾಪ್ರಭುತ್ವ"ದಲ್ಲಿ ಪ್ರಜೆಗಳು ಪ್ರಾಜ್ಞರಾದರೆ ಪ್ರಭುತ್ವವೂ ಪ್ರಬಲವಾಗುತ್ತದೆ. ಪ್ರಭುತ್ವದ ಹೊರೆಯನ್ನು ಹೊತ್ತಿರುವ ಪ್ರಜೆಗಳು ಅವಿದ್ಯಾವಂತರಾದರೆ, ಪ್ರಭುತ್ವ ಯಶಸ್ವಿಯಾಗಲಾರದು. ಅವಿದ್ಯಾವಂತರು, ಕಣ್ಣಿದ್ದೂ ಕುರುಡುರಾಗಿ, ಕಿವಿಯಿದ್ದೂ ಕಿವುಡರಾಗಿ. ನಾಲಿಗೆಯಿದ್ದೂ ಮೂಕರಾಗಿ ಹೃದಯವಿದ್ದೂ ಭಾವಶೂನ್ಯತೆಯಿಂದ ಬರಡಾದ ಜೀವನವನ್ನು ನಡೆಸು

ತ್ತಾರೆ. ಪ್ರಾಪಂಚಿಕ ವ್ಯವಹಾರವೇ ಅವರಿಗೆ ಗೊತ್ತಿರು
ಸರ್ಕಾರ ತವುಗಾಗಿ ಕೈಗೊಂಡಿರುವ ಅಭಿವೃದ್ಧಿ ಕಾ
ಅರಿವೇ ಅವರಿಗಿಲ್ಲದಂತಾಗಿ, ಅವುಗಳ ಪ್ರಯೋಜನ ಪ
ಅಸಮರ್ಥರಾಗುತ್ತಾರೆ. ಆಗ ಆರ್ಥಿಕಾಭಿವೃದ್ಧಿಗಾಗಿ
ಕಾರ್ಯಕ್ರಮಗಳೆಲ್ಲಾ ಕುಸಿದು ಬೀಳುತ್ತವೆ. ಇದರಿಂದ ಕಂ
ಇಲಾಖೆಯ ಭೂ ಅಭಿವೃದ್ಧಿ ಯೋಜನೆ, ವ್ಯವಸಾಯ
ಖೆಯ ಹಸಿರು ಕ್ರಾಂತಿ ಯೋಜನೆ. ಪಶುಸಂಗೋಪನ ಇ
ಶ್ವೇತ ಕ್ರಾಂತಿ ಯೋಜನೆ, ಅರಣ್ಯ ಇಲಾಖೆಯ ಕಾಡ
ಯೋಜನೆ, ಆರೋಗ್ಯ ಇಲಾಖೆಯ ಮಿತಸಂತಾನ ಯೋ
ಯಶಸ್ಸಿಗೆ ಶಿಕ್ಷಣ ಇಲಾಖೆಯ ಕಡ್ಡಾಯ ಶಿಕ್ಷಣ
ಯಶಸ್ವಿಯಾಗಲೇಬೇಕು. ಈ ಯೋಜನೆಗಳ
ವ್ಯಕ್ತಿಯ ಹಾಗೂ ದೇಶದ ಆರ್ಥಿಕ ಅಭಿವೃದ್ಧಿ ಭಾಗಿ
ತ್ತದೆ. ಆರ್ಥಿಕಾಭಿವೃದ್ಧಿ ಹಾಗೂ ಪ್ರಜಾಪ್ರಭುತ್ವ
ನಿಕಟವಾದ ಸಂಬಂಧವಿದೆ. ಆರ್ಥಿಕಾಭಿವೃದ್ಧಿ ಇ
ಪ್ರಭುತ್ವ ಪೂರ್ಣವಾಗಿ ಯಶಸ್ವಿಯಾಗಲಾರದು.
ರಾಷ್ಟ್ರ ಸುಭದ್ರವಾಗಬೇಕಾದರೆ, ಪ್ರಜಾಪ್ರಭುತ್ವ
ಬೇಕಾದರೆ, ಆರ್ಥಿಕ ಪ್ರಗತಿ ಸಾಧಿಸಬೇಕಾದರೆ ಪ್ರ
ಪ್ರಜೆಯೂ ವಿದ್ಯಾವಂತನಾಗಬೇಕು. ರಾಷ್ಟ್ರ ಸಂಕಷ್ಟಕ್ಕೆ
ಅದರ ವಿಮೋಚನೆಗೆ ನೆರವಾಗಬಲ್ಲನು.

ಆದ್ದರಿಂದ ಪಾಥಮಿಕ ಶಿಕ್ಷಣವನ್ನು ಕಡ್ಡಾಯ
ವ್ಯಕ್ತಿಯು ಪಡೆಯಬೇಕು.

— ———

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

೧ ಉಪ್ಪು- ಕ್ಷಾರ- ಭೂಮಿ ಮತ್ತು ಅವುಗಳ ಸುಧಾರಣೆ

—ವಿಜಯಕುಮಾರ ಗಿಡ್ನವರ

೨ ಪ್ಲಾಸ್ಟಿಕ್ ಸರ್ಜರಿ (ಸುರಪಕ ಶಸ್ತ್ರವಿಜ್ಞಾನ)

—ವಾಯ್. ಎನ್. ಇರಕಲ್ಲ

೩ ಕಲಬುರಗಿ ಜಿಲ್ಲೆಯ ಶಿಲಾಶಾಸನಗಳು

—ವ್ಹಿ. ಶಿವಾನಂದ

೪ ತುಂಗಭದ್ರಾ ನೀರಾವರಿ ಬೆಳೆಗಳು

—ವಿಜಯಕುಮಾರ ಗಿಡ್ನವರ

೫ ದ್ರಾವಿಡ ಜನಾಂಗ

—ಸಂಗಮೇಶ ಡಿ. ಸವದತ್ತಿಮಠ

೬ ವರಲಕ್ಷ್ಮಿ ಹೈಬ್ರಿಡ್ ಹತ್ತಿ

—ವಿಜಯಕುಮಾರ ಗಿಡ್ನವರ

೭ ಜೋಳದ ಕೀಟ ಪಿಡುಗುಗಳು ಹಾಗೂ ಅವುಗಳ ಹತೋಟಿ

—ಕೆ. ಎ. ಕುಲಕರ್ಣಿ

೮ ಬಾಲ ಲೀಲಾ ಮಹಾಂತ ಶಿವಯೋಗಿ

—ಎಸ್. ಎಸ್. ಭೂಸರಡ್ಡಿ

೯ ಮೈಲಾರ ಬಸವಲಿಂಗ ಶರಣರು

—ದೇವೇಂದ್ರಕುಮಾರ ಹಕಾರಿ

೧೦ ತರ್ದವಾಡಿ ನಾಡು

—ಆರ್. ಎನ್. ಗುರವ

---

ಪ್ರಸಾರಾಂಗ ವಿಸ್ತರಣ–ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩